ಕಾಯಕವೇ ಕೈಲಾಸ

# ಸಿದ್ಧಗಂಗಾ

ದಸರಾ ಹಬ್ಬದ ಶುಭಾಶಯಗಳು

ಸಂಪುಟ : ೫೪ ಅಕ್ಟೋಬರ್ ೨೦೧೮ ಸಂಚಿಕೆ : ೧೦



ತುಮಕೂರು ಜಿಲ್ಲೆ ಗುಬ್ಬಿಯಲ್ಲಿ ಏರ್ಪಡಿಸಿದ್ದ ಅಂತರ ಕಾಲೇಜುಗಳ ಭಾರ ಎತ್ತುವ ಸ್ಪರ್ಧೆಯಲ್ಲಿ ಶ್ರೀ ಸಿದ್ಧಗಂಗಾ ಐಹಿಕ ಮಹಾವಿದ್ಯಾಲಯದ ಕ್ರೀಡಾಪಟುಗಳು ಭಾಗವಹಿಸಿ ೬ ಚಿನ್ನ ಹಾಗೂ ೨ ಪದಕಗಳನ್ನು ಪಡೆದ ಸಂದರ್ಭದಲ್ಲಿ ಪರಮಪೂಜ್ಯ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು



ತುಮಕೂರು ವಿಶ್ವವಿದ್ಯಾಲಯದಲ್ಲಿ ಏರ್ಪಡಿಸಿದ್ದ ವಿವಿಧ ಅಧ್ಯಯನ ವಿಭಾಗಗಳ ಉದ್ಘಾಟನೆ ಹಾಗೂ ಪ್ರಥಮ ವರ್ಷದ ಸ್ನಾತಕೋತ್ತರ ವಿದ್ಯಾರ್ಥಿಗಳ ಪ್ರವೇಶೋತ್ಸವ ಸಮಾರಂಭ ಪೂಜ್ಯರಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು, ಡಾ. ಶ್ರೀ ಶ್ರೀ ನಿರ್ಮಲಾನಂದ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ಸಚಿವರಾದ ಶ್ರೀ ಜಿ.ಟಿ. ದೇವೇಗೌಡ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ತುಮಕೂರು ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕಿನ ಸರ್ವಸದಸ್ಯರ ವಾರ್ಷಿಕ ಮಹಾಸಭೆಯಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಪಾದಪೂಜೆ ನೆರವೇರಿಸಲಾಯಿತು. ಈ ಸಂದರ್ಭದಲ್ಲಿ ಡಾ. ಎಂ.ಎನ್. ಚನ್ನಬಸಪ್ಪ, ಶ್ರೀ ಟಿ.ಕೆ. ನಂಜುಂಡಪ್ಪ, ಶ್ರೀ ಕೆ.ಎಸ್. ಶಂಕರಯ್ಯ, ಬ್ಯಾಂಕಿನ ಆಡಳಿತ ಮಂಡಳಿ ಹಾಗೂ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೪  ಅಕ್ಟೋಬರ್ ೨೦೧೮  ಸಂಚಿಕೆ : ೧೦


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.


## ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00



# ಸಂಪಾದಕೀಯ........

ಅಕ್ಟೋಬರ್ ೨, ಭಾರತೀಯರ ಭಾಗ್ಯೋದಯದ ಪುಣ್ಯದಿನ, ಅಂದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು ಹುಟ್ಟಿದ ದಿನ. ಭಾರತೀಯರರೆಲ್ಲರಿಗೆ ಹೆಮ್ಮೆಯನ್ನುಂಟು ಮಾಡುವುದಾಗಿದೆ. ಅಲ್ಲಲ್ಲಿ ಗಾಂಧೀಜಿಯ ಭಾವಚಿತ್ರಕ್ಕೆ ಪೂಜೆ. ಹಾಗೆಯೇ ಅವರ ಭಾವಚಿತ್ರದ ಅನಾವರಣ. ಈ ಸಂದರ್ಭದಲ್ಲಿ ಶ್ರೀಮಠದ ವಿದ್ಯಾರ್ಥಿಯಾಗಿದ್ದ ರಾಷ್ಟ್ರಕವಿ ಡಾ.ಜಿ.ಎಸ್. ಶಿವರುದ್ರಪ್ಪನವರ ಕವನ ನೆನಪಾಗುತ್ತದೆ. 'ಅನಾವರಣವಾಯಿತಂತೆ ಗಾಂಧೀಜಿಯವ ಚಿತ್ರಕೆ, ಸತ್ತಗಾಂಧಿ ಅತ್ತನೇನೋ ನಡೆದ ಈ ವಿಚಿತ್ರಕೆ, ಅನಾವರಣವಾಗಬೇಕು ಮೊದಲು ನಮ್ಮ ಹೃದಯಕೆ, ಅನಾವರಣವಾದ ಮೇಲೆ ಸಿದ್ಧನಾಗು ಶಿಕ್ಷೆಗೆ'. ಹೌದಲ್ಲವೆ? ಇಂದು ರಾಷ್ಟ್ರದುದ್ದಗಲದಲ್ಲಿ ನಡೆದಿರುವುದಾದರೂ ಏನು? ಲೂಟಿ, ಲಂಚಗಳ, ಎಗ್ಗಿಲ್ಲದ ದಂಧೆ. ನಮ್ಮನ್ನಾಳುತ್ತಿರುವವರೆಲ್ಲ ಕೋಟಿ ಕೋಟಿ ರೂಗಳನ್ನು ಮನೆತುಂಬಿಸಿಕೊಳ್ಳುವ ಕೆಲಸ. ಬಸವಣ್ಣನವರು ಹೇಳುವಂತೆ 'ಅಂದಣವನೇರಿದ ಸೊಣಗನಂತೆ ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು. ಸುಡು, ಸುಡು, ಮನವಿದು ವಿಷಯಕ್ಕೆ ಹರಿವುದು. ಮೃಡ ನಿಮ್ಮನನುದಿನ ನೆನೆಯಲೀಯದು, ಎನ್ನೊಡೆಯ ಕೂಡಲಸಂಗಮದೇವಾ, ನಿಮ್ಮ ಚರಣವ ನೆನೆವಂತೆ ಕರುಣಿಸು, ಸೆರಗೊಡ್ಡಿ ಬೇಡುವೆ ನಿಮ್ಮ ಧರ್ಮ' ಎಂದಿದ್ದಾರೆ.

ಮಹಾತ್ಮ ಗಾಂಧೀಜಿಯವರು ಮೊಟ್ಟಮೊದಲು ಕರ್ನಾಟಕಕ್ಕೆ ಬಂದ ಸಂದರ್ಭ, ಬೆಳಗಾವಿಯಲ್ಲಿ ಕಾಂಗ್ರೆಸ್ ಸಮ್ಮೇಳನದ ಸಂದರ್ಭ. ಅವರು ಅಂದು ಹೇಳಿದಮಾತು ಬಸವಣ್ಣನಂಥ ಮಹಾನುಭಾವ ಉದಯಿಸಿದ ಪುಣ್ಯದನಾಡು ಈ ಕರ್ನಾಟಕ. ವಿಶೇಷವಾಗಿ ನಾನು ಹೇಳುವುದೇನಿಲ್ಲ ಎಂದರು. ನಾವು ಮರೆಯಬಾರದು ಸರಳ ಜೀವನ, ಉನ್ನತ ಚಿಂತನಕ್ಕೆ ಹೆಸರಾದ ಮಾಜಿ ಪ್ರಧಾನಿ ಶ್ರೀ ಲಾಲ್‌ಬಹದ್ದೂರ್ ಶಾಸ್ತ್ರಿಯವರನ್ನು, ಅಟಲ್ ಬಿಹಾರಿ ವಾಜಪೇಯಿರವರನ್ನು, ಡಾ. ಸರ್ವಪಲ್ಲಿ ರಾಧಾಕೃಷ್ಣನ್ ಅವರನ್ನು, ಅವರೆಲ್ಲ ಗಾಂಧಿ ಮಾರ್ಗಾನುಯಾಯಿಗಳಾದವರು. ಗಾಂಧೀಜಿಯವರ ಕಥೆಯೊಂದು 'ಕಣ್ಣುಮುಚ್ಚಿದ, ಕಿವಿಮುಚ್ಚಿದ, ಬಾಯಿ ಮುಚ್ಚಿದ ಕೋತಿಯೊಂದು' ನೆನಪಾಗುತ್ತದೆ. ಕೆಟ್ಟದ್ದನ್ನು ನೋಡದ, ಕೆಟ್ಟದ್ದನ್ನು ಕೇಳದ, ಕೆಟ್ಟದ್ದನ್ನು ಆಡದ 'ಸಾಂಕೇತಾರ್ಥದ' ಕಥೆ. ಆದರೆ ನಾವಿಂದು ಒಳ್ಳೆಯದನ್ನು ನೋಡದ, ಕೇಳದ ಆಡದ ಕೋತಿಗಳಾಗಿದ್ದೇವೆ ಅಲ್ಲವೆ? ಕವಿಗಳು ಹೇಳಿದಂತೆ ನಾವೆಷ್ಟು ನಡೆನುಡಿ ಚಿಂತನೆಗಳಲ್ಲಿ ಗಾಂಧೀ ಮಾರ್ಗಾನುಯಾಯಿಗಳಾಗಿದ್ದೇವೆ ಎಂದು.

ಸಿದ್ಧಗಂಗಾ ಮಾಸಪತ್ರಿಕೆಯ ಚಂದಾದಾರರೆಲ್ಲರಿಗೂ ಗಾಂಧಿ ಜಯಂತಿ ಹಾಗೂ ದಸರಾ ಹಬ್ಬದ ಹಾರ್ದಿಕ ಶುಭಾಶಯಗಳು.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು





# ಶ್ರೀವಾಣಿ

## ಕಾಯಕ ಮತ್ತು ದಾಸೋಹ

ಶರಣ ಧರ್ಮ ಕಾಯಕ ದಾಸೋಹ ತತ್ತ್ವದ ಬುನಾದಿಯ ಮೇಲೆ ಆಡಳಿತ ಸುಂದರ ಸಮನ್ವಯ ಧರ್ಮ. ಈ ಧರ್ಮ ಭಗವತ್ಸಾಕ್ಷಾತ್ಕಾರವನ್ನು ವೇದಗಳಲ್ಲಿ ಅರಸಲಿಲ್ಲ. ಶಾಸ್ತ್ರಗಳಲ್ಲಿ ಹುಡುಕಲಿಲ್ಲ, ಪುರಾಣಗಳಲ್ಲಿ ಕಾಣಲಿಲ್ಲ. ಆಗಮಗಳ ಬೆನ್ನತ್ತಿ ಹೋಗಲಿಲ್ಲ. ತ್ರಿವಿಧ ದಾಸೋಹದಲ್ಲಿ ಕಂಡಿತು. ತೃಪ್ತಿ ಕಂಡುಕೊಂಡಿತು. ಕಾಯಕ ಸ್ವಾವಲಂಬನೆಯನ್ನು ಪ್ರತಿಪಾದಿಸಿದರೆ ದಾಸೋಹ ನಿರಹಂಕಾರವನ್ನು ನೀಡಿತು.

ಈ ಸದ್ಧರ್ಮ ನೆಲದ ಮರೆಯ ನಿಧಾನ. ಆಕಾಶದ ಮರೆಯ ನಿಧಾನ, ಸಕಲ ತತ್ತ್ವ ಭುವನ ಬ್ರಹ್ಮಾಂಡಗಳ ಮರೆಯ ನಿಧಾನ, ತನ್ನ ಮರೆಯ ನಿಧಾನವಾದ ಸತ್ತು ಚಿತ್ತು ನಿತ್ಯಪರಿಪೂರ್ಣವಾದ ವಿಜ್ಞಾನದಲ್ಲಿ ಕಂಡು ಪರಮ ಪರಂಜ್ಯೋತಿಯಾದ ಸ್ವಯಂಭುಲಿಂಗನನ್ನು ಶಿವಯೋಗದಲ್ಲಿ ಕೂಡಿಕೊಂಡು ಇಷ್ಟಪ್ರಾನ ಭಾವಲಿಂಗವನ್ನು ಸರ್ವಾಂಗದಲ್ಲಿ ಶಿವಾದ್ವೈತ ಭಕ್ತಿ ಉಕ್ಕಿ ಪೂಜಿಸುವ ಕ್ರಿಯೆಯಲ್ಲಿ ಮರ್ತ್ಯಲೋಕದಲ್ಲಿ ಮಾನವನ ಮಣಿಹವೆಂದಿತು. ಲಿಂಗಾನುಭವ, ಲಿಂಗಜ್ಞಾನ, ಲಿಂಗಯೋಗ, ಲಿಂಗಭಕ್ತಿ, ಲಿಂಗಪೂಜೆ, ಜಂಗಮ ದಾಸೋಹದಲ್ಲಿ ಸವೆಯಬೇಕೆಂದು ನಡೆದು ತೋರಿಸಿದರು ಶರಣರು.

ಶರಣಧರ್ಮ ಬಿದ್ದವರನ್ನು, ಬೀಳುತ್ತಿರುವವರನ್ನು, ಬೀಳಲಿರುವವರನ್ನು ಕೈ ಹಿಡಿದು ಮೇಲಕ್ಕೆ ಎತ್ತುವುದೇ ಧರ್ಮ ಎಂದು ನಂಬಿ ನಡೆದಿರುವಂಥದು. ಅದಕ್ಕೆ ಜಾತಿ ಮುಖ್ಯವಾಗಲಿಲ್ಲ. ಪುರುಷ ಮಹಿಳೆ ಎಂಬುದಾಗಲಿಲ್ಲ. ಕುಂಟ, ಕುರುಡ, ಕಿವುಡರನ್ನು ಉದ್ಧರಿಸಬೇಕೆಂಬುದೇ ಆಯಿತು. ಏಕೆಂದರೆ 'ಧರ್ಮೋ ರಕ್ಷತಿ ರಕ್ಷಿತಃ' ಎಂದು ನಂಬಿ ನಡೆದದ್ದು ಶರಣಧರ್ಮ–ಅದು ಎಲ್ಲ ಕಾಲಕ್ಕೂ, ಎಲ್ಲ ದೇಶಕ್ಕೂ ಸಲ್ಲುವಂಥದ್ದು.

* * *

## ಲಾಲ್‌ಬಹದ್ದೂರ್ ಶಾಸ್ತ್ರಿ

ಲಾಲ್‌ಬಹದ್ದೂರ್ ಶಾಸ್ತ್ರಿಗಳು ೧೮ ತಿಂಗಳು ಪ್ರಧಾನಮಂತ್ರಿಯಾಗಿದ್ದರು. ಪರಮಾತ್ಮ ಅವರಿಗೆ ಆಯಸ್ಸು ಕೊಡಲಿಲ್ಲ. ಅವರು ಇನ್ನೂ ಐದು ವರ್ಷ ಇದ್ದಿದ್ದರೆ ನಾವು ಹೊಸ ಭಾರತವನ್ನು ಕಾಣುತ್ತಿದ್ದೆವೋ ಏನೋ? ಪ್ರಧಾನಿಯಾಗಿ ತೀರಿಕೊಂಡಾಗ ಅವರಿಗೆ ಸ್ವಂತ ಆಸ್ತಿ ಇರಲಿಲ್ಲ. ಮನೆ ನಿವೇಶನವೂ ಕೂಡ ಇರಲಿಲ್ಲ. ಒಂದು ಸಣ್ಣ ಕಾರನ್ನು ಸಾಲ ಮಾಡಿ ಇಟ್ಟಿದ್ದರು. ಅವರೊಬ್ಬರು ಮಹಾನ್ ತ್ಯಾಗಜೀವಿ. ಸರ್ಕಾರ ಬದಲಾವಣೆ ಆಯಿತು. ಇನ್ನೊಂದು ಸರ್ಕಾರ ಬಂತು. ಮನೆಗಳ ರಿಪೇರಿ ಮಾಡುವುದಕ್ಕೆ, ಹೊಸ ಹೊಸ ಮನೆಗಳನ್ನು ಕಟ್ಟುವುದಕ್ಕೆ ಬಹಳ ಖರ್ಚು ಮಾಡಿದರು. ಇದಕ್ಕೆಲ್ಲ ಕಡಿವಾಣ ಹಾಕಬೇಕಾದರೆ ಜನಜಾಗೃತರಾದಾಗ ಮಾತ್ರ, ನಮ್ಮ ದೇಶದಲ್ಲಿ ಮೊದಲು ವಿಚಾರ ಕ್ರಾಂತಿಯಾಗಬೇಕು.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ

**ಸುರತರು ವೃಕ್ಷದೊಳಗಲ್ಲ,**
**ಸುರಧೇನು ಪಶುವಿನೊಳಗಲ್ಲ,**
**ಪರುಷ ಪಾಷಾನದೊಳಗಲ್ಲ**
**ಶಿಷ್ಯನ ಭಾವಕ್ಕೆ ಗುರು ನರನಲ್ಲ,**
**ಗುರುವೇ ಪರಮೇಶ್ವರನೆಂದು ಭಾವಿಸಬಲ್ಲಡೆ,**
**ಶಿಷ್ಯನೆಂಬೆನಯ್ಯಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಸುರತರು ವೃಕ್ಷದೊಳಗಲ್ಲ : ಸುರತರು – ಅಷ್ಟಶಾಖೆಗಳಿಂದ ಅಷ್ಟಭೋಗ, ಅಷ್ಟಮಹದೈಶ್ವರ್ಯವನು ಕರುಣಿಸಿಕೊಡುವಂಥ ಕಲ್ಪವೃಕ್ಷವು, ವೃಕ್ಷದೊಳಗಲ್ಲ – ಎಲ್ಲಾ ಖಾಲಿ ಬೊಬ್ಬುಲಿ ವೃಕ್ಷಂಗಳೊಳಗೆ ಅದು ಒಂದು ವೃಕ್ಷವಲ್ಲವು ; ಸುರಧೇನು ಪಶುವಿನೊಳಗಲ್ಲ – ಸುರಧೇನು ಪಂಚಕುಚಂಗಳಿಂದ ಪಂಚಾಮೃತವನು ಕರುಣಿಸಿ ಕೊಡುವಂಥ ಕಾಮದುಘವು, ಪಶುವಿನೊಳಗಲ್ಲ – ಎಲ್ಲಾ ಆಕಳದೊಳಗೆ ಅದು ಒಂದು ಆಕಳಲ್ಲವು ; ಪರುಷ – ಪರುಷದ ಕಣಿಯು, ಪಾಷಾಣದೊಳಗಲ್ಲ – ಎಲ್ಲಾ ಕಾಡುಗಲ್ಲುಗಳೊಳಗೆ ಅದು ಒಂದು ಕಲ್ಲಲ್ಲವು ; ಶಿಷ್ಯನ ಭಾವಕ್ಕೆ ಗುರು ನರನಲ್ಲ : ಶಿಷ್ಯನ ಭಾವಕ್ಕೆ – ಶಿಷ್ಯೋತ್ತಮನ ಶಿವಭಾವಕ್ಕೆ, ಗುರು – ಶ್ರೀಗುರುನಾಥನು, ನರನಲ್ಲ – ಮನುಷ್ಯನಲ್ಲವು, ಗುರುವೆ – ಶ್ರೀ ಗುರುನಾಥನೆ, ಪರಮೇಶ್ವರನೆಂದು – ನಿಷ್ಕಲಬ್ರಹ್ಮವೆಂದು, ಭಾವಿಸಬಲ್ಲರೆ – ಹೀಗೆಂದರಿಯಬಲ್ಲಡೆ, ಶಿಷ್ಯನೆಂಬೆನಯ್ಯಾ – ಶಿಷ್ಯೋತ್ತಮನೆಂದು ಹೇಳುವೆನಯ್ಯಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಸಾಣೆಯಾಗಲಿ ಕಾಯ ಕಾವ್ಯವಾಗಲಿ ಆತ್ಮ
ಕಾಯ ಕರಣಗಳೆಲ್ಲ ನಗುತಿರಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಿತ ನದಿಯಾಗಿರಲಿ ಬಿರಿವ ಮೊಗ್ಗಾಗಿರಲಿ
ಸ್ಥಿರವಿರಲಿ ಪ್ರೀತಿ ಬದುಕಿನಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪರನಿಂದೆ ಪರಕೇಡು ಪರಮೋಸ ಬರದಿರಲಿ
ಗುರುಪರಮದೈವವೆಂಬರಿವಿರಲಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಂಸಾರವೆಂಬುದು ಸಾಗರ ಹೊಳೆಯೆಂದೆ
ಸಂಸಾರ ಸಾವಿರಕೆ ಹಿರಿದೆಂದೆ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ಶ್ರೀ ಸದ್ಗುರುವೆ ಪರಮಾತ್ಮ ಚಿತ್ಕಳೆಯೇ
ನಿರುಪಮ ಶ್ರೀನಿಧಿಯೇ ಕರುಣಾಳೆ । ನೀನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಠದೊಳಗೆ ನೀನಿರುವೆ ನಿನ್ನೊಳಗೆ ಮಠವಿಹುದು
ಜಟಿಲ ಜಗದೊಳಗಿಹ ಜಂಗಮವೆ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಚೆಂಗಾವಿಯ ಉಡುಗೆ ಕಂಗಳಿಗೆ ಕಮನೀಯ
ಲಿಂಗಕ್ಕೊಪ್ಪುವ ನಡೆ-ನುಡಿಯ । ಶಿವಬೆಳಕೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆರು ದರ್ಶನದೊಳಗೆ ಅರಳಿರುವ ಶ್ರೀಗುರುವೆ
ಆರು ಸ್ಥಲದೊಳಗೆ ನಗುತಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುಲಿಂಗಜಂಗಮವೆ ವರಪುಣ್ಯಶೀಲವೆ
ನಿರುಪಮ ನಿರಾಭಾರಿ ಶ್ರೀಬೆಳಕೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀತಿಕ್ರಿಯಾಚಾರ ನಿತ್ಯಬೋಧಿಸಿ ನಡೆದು
ಸತ್ಯಶೀಲಾಚಾರ ಬಿತ್ತಿರುವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



## ಚಿಂತನ

# ಕಾಣದುದ ಕಾಣು

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ವಸ್ತುವಿಗೆ ಎರಡು ಮೈಗಳು. ಒಂದು ಹೊರಮೈ, ಇನ್ನೊಂದು ಒಳಮೈ. ಹೊರಮೈ ಗೋಚರ. ಒಳಮೈ ಆಗೋಚರ.

ಈ ಹೂವನ್ನು ನಾನು ಕಣ್ಣಿನಿಂದ ನೋಡುತ್ತೇವೆ. ಕೈಯಿಂದ ಹಿಡಿಯುತ್ತೇವೆ. ಅದರ ಸುಗಂಧವನ್ನು ಮೂಸುತ್ತೇವೆ. ಮಕರಂದವನ್ನು ರುಚಿಸುತ್ತೇವೆ. ಆ ಹೂವು ಬೀಳುವ ಏಳುವ ಸದ್ದನ್ನು ಕೇಳುತ್ತೇವೆ. ಇದು ಹೂವಿನ ಗೋಚರವಾದ ಹೊರಮೈ.

ಈ ಹೂವು ಅರಳುತ್ತದೆ, ಬಾಡುತ್ತದೆ. ಈ ಅರಳುವಿಕೆ ಬಾಡುವಿಕೆಯ ಮಧ್ಯ ಅದು ಬಾಳಿಕೊಂಡಿದೆ. ಹೂವಿನ ಕಾಂತಿಗೆ, ಕಮನೀಯತೆಗೆ, ಬಾಳುವಿಕೆಗೆ ಕಾರಣವಾದುದು ಅದರ ಒಳಮೈ, ಅಂತಸ್ಸತ್ವ, ಪ್ರಾಣ. ಅದು ಅಗೋಚರ.

ಮಗುವಿನ ನಗೆಗೆ, ಬಗೆಬಗೆಯ ಆಟಕ್ಕೆ, ಮಾತಿನ ಮಾಟಕ್ಕೆ, ಕಣ್ಣಿನ ಕಳೆಗೆ, ನಡಿಗೆಯ ಮೋಡಿಗೆ ಒಟ್ಟಾರೆ ಅದರ ಬದುಕಿಗೆ ಬೆಳವಣಿಗೆಗೆ ಕಾರಣವಾಗಿರುವುದು ಅದರ ಹೃದಯದೊಳಗಿರುವ ಪ್ರಾಣಸ್ಪಂದನ. ಅದಿಲ್ಲದಿರೆ ಮಗುವಿಲ್ಲ. ನಗುವಿಲ್ಲ.

ಸೂಕ್ಷ್ಮವಾದ ಆ ಪ್ರಾಣಸ್ಪಂದನ ಕಣ್ಣಿಗೆ ಕಾಣದು. ಕೈಗೆಟುಕದು. ಹಾಗೆಂದ ಮಾತ್ರಕ್ಕೆ ಆದಿಲ್ಲವೆಂದಲ್ಲ. ಆಯುಷ್ಯದುದ್ದಕ್ಕೂ ನಮ್ಮ ಶರೀರವನ್ನು ಗಟ್ಟಿಯಾಗಿ ನಿಲ್ಲಿಸಿದ್ದು, ನಡೆಸಿದ್ದು, ಮಾಡಿಸಿದ್ದು ಅದೇ ಪ್ರಾಣಶಕ್ತಿ, ಒಳಮೈ, ಅಂತಸ್ಸತ್ವ.

ಒಂದು ವಸ್ತುವನ್ನು ನಾನು ಎತ್ತುತ್ತೇನೆ. ಆ ವಸ್ತುವನ್ನು ಎತ್ತಿದ್ದು ನನ್ನ ಕೈಯೊಳಗಿರುವ ಶಕ್ತಿ. ಈ ಶಕ್ತಿಯೂ ನಮ್ಮ ಕಣ್ಣಿಗೆ ಕಾಣದು. ಆದರೆ ಅನುಭವಕ್ಕೆ ಬರುತ್ತದೆ. ಯಾವುದರ ಮೂಲಕ ಸೂಕ್ಷ್ಮವಾದ ಈ ಶಕ್ತಿಯ ಇರುವಿಕೆ ನಮ್ಮ ಅನುಭವಕ್ಕೆ ಬರುತ್ತದೆಯೋ ಅದು ವಿಶೇಷ ಸಾಧನ, ಅಂತಃಕರಣ.

ಒಬ್ಬ ವ್ಯಕ್ತಿಯನ್ನು ನೋಡುತ್ತೇನೆ. ಆತನ ಮುಖದ ಮೇಲೆ ಕಳೆಯಿಲ್ಲ. ತಕ್ಷಣವೇ ನಾವು ಊಹಿಸುತ್ತೇವೆ "ಈತ ಏನೋ ಆಲೋಚನೆಯಲ್ಲಿದ್ದಾನೆ. ಇವನಿಗೆ ಚಿಂತೆಯಾಗಿದೆ, ದುಃಖವಾಗಿದೆ" ಎಂದು.

ಆತನ ದುಃಖವೇನೂ ನಮ್ಮ ಕಣ್ಣಿಗೆ ಕಾಣುವುದಿಲ್ಲ. ಆದರೂ ಆತನಿಗೆ ದುಃಖವಾಗಿರುವುದನ್ನು ನಾವು ಗುರುತಿಸುತ್ತೇವೆ. ಹಾಗೆಯೇ ನಾವು ಸುಖ-ದುಃಖಾದಿ ಇತರ ಭಾವನೆಗಳನ್ನು ಅರಿಯುತ್ತೇವೆ.

ನಮ್ಮ ಕಿವಿಗೆ ಒಂದು ಶಬ್ದ ಕೇಳಿಸುತ್ತದೆ. ಆದರೆ ಆ ಶಬ್ದದ ಒಳಗೆ ಹುದುಗಿರುವ ಅರ್ಥ ಕಿವಿಗೆ ತಿಳಿಯುವುದಿಲ್ಲ. ನಮ್ಮ ಅಂತರಂಗಕ್ಕೆ ಮಾತ್ರ ಅದು ತಿಳಿಯುತ್ತದೆ. ಶಬ್ದವನ್ನು ಕೇಳಿದ್ದು ಕಿವಿ. ಅದು ಬಾಹ್ಯೇಂದ್ರಿಯ. ಶಬ್ದದ ಅರ್ಥವನ್ನು ತಿಳಿದುಕೊಂಡದ್ದು ಅಂತರೇಂದ್ರಿಯ, ಅಂತಃಕರಣ, ಅದೇ ಮನಸ್ಸು.

ಮನುಷ್ಯನನ್ನು ಮನುಷ್ಯನನ್ನಾಗಿ ಮಾಡಿದ್ದು, ಜಗದ ಜಾಣನಾಗಿಸಿದ್ದು ಈ ಮನಸ್ಸು. ಮನುಷ್ಯನು, ಬಾಹ್ಯ ಇಂದ್ರಿಯಗಳಿಂದ ವಸ್ತುಗಳನ್ನು ಕೇವಲ ನೋಡಿ ಮಾಡಿ, ಮುಟ್ಟಿ-ತಟ್ಟಿ ಸುಮ್ಮನಿರುವುದಿಲ್ಲ. ಅವುಗಳ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.







ಅಂತರಂಗಕ್ಕಿಳಿಯುತ್ತಾನೆ. ಅವುಗಳಿಂದುಂಟಾಗುವ ಸುಖದುಃಖಾದಿ ಭಾವನೆಗಳನ್ನು ತನ್ನಂತರಂಗದಲ್ಲಿ ಅನುಭವಿಸುತ್ತಾನೆ. ಜೀವಂತಿಕೆ, ಚೆಲುವು-ಗೆಲುವುಗಳನ್ನು ತೋರುತ್ತಾನೆ.

ಮನುಷ್ಯನ ಈ ಎಲ್ಲ ವೈವಿಧ್ಯಮಯವಾದ ಅನುಭವಗಳಿಗೆ ಕಾರಣವಾದ ಈ ಅಂತಃಕರಣಕ್ಕೆ ಅಥವಾ ಮನಸ್ಸಿಗೆ ಒಳಗಣ್ಣು ಎಂದು ಕರೆಯುತ್ತಾರೆ. ಹೊರಗಣ್ಣು ಸ್ಥೂಲವಾದ ಜಗತ್ತನ್ನು ತೋರಿಸುತ್ತದೆ. ಒಳಗಣ್ಣು ಅಥವಾ ಮನಸ್ಸು ಸೂಕ್ಷ್ಮ ಜಗತ್ತನ್ನು ತೋರಿಸುತ್ತದೆ.

ಸ್ಥೂಲಜಗತ್ತಿನ ಸಮಸ್ತ ವಸ್ತುಗಳು, ಸೂಕ್ಷ್ಮಜಗತ್ತಿನ ಪ್ರಾಣಸ್ಪಂದನ, ಸಕಲ ಭಾವನೆಗಳು ಒಂದು ದಿನ ತೋರಿ ಮತ್ತೆ ಮರೆಯಾಗುತ್ತವೆ. ಅವೆಲ್ಲವೂ ತೋರಿ, ಎಲ್ಲಿ ಮರೆಯಾಗುತ್ತವೆಯೋ ಅದೇ ಅಂತಿಮಸತ್ಯ. ಅದನ್ನು ಕಾಣುವ ಇನ್ನೊಂದು ಸಾಧನ ನಮ್ಮೊಳಗಿದೆ; ಅದು ಪ್ರಜ್ಞಾದೃಷ್ಟಿ. ಬಾಹ್ಯದೃಷ್ಟಿಗೆ ಬಾಹ್ಯಜಗತ್ತು, ಅಂತರ್ದೃಷ್ಟಿಗೆ ಭಾವಜಗತ್ತು ಕಾಣುತ್ತದೆ. ಪ್ರಜ್ಞಾದೃಷ್ಟಿಗೆ ಅನಂತವಾದ ಸತ್ಯ ಗೋಚರಿಸುತ್ತದೆ.

ಹೊರಗಣ್ಣು ಹಾಗೂ ಒಳಗಣ್ಣನ್ನು ಬಳಸಿ ಸ್ಥೂಲ ಹಾಗೂ ಸೂಕ್ಷ್ಮಜಗತ್ತನ್ನು ಕಾಣುವವರು ನಾವು ಸಾಮಾನ್ಯರು. ಪ್ರಜ್ಞಾದೃಷ್ಟಿಯನ್ನು ಬಳಸಿ ಅನಂತವಾದ ಸತ್ಯವನ್ನು ಕಾಣುವವರೇ ಜ್ಞಾನಿಗಳು, ಸಂತರು.

ಬಾಹ್ಯಾಂತರ್ದೃಷ್ಟಿಯುಳ್ಳ ನಮಗೆ ಭೇದದರ್ಶನ, ಸಮಸ್ತ ಸೃಷ್ಟಿಯ ಸಚರಾಚರವಸ್ತುಗಳ ಅಂತರಂಗದಲ್ಲಿ ಮಹಾಸತ್ಯವನ್ನು ಕಾಣುವ ಪ್ರಜ್ಞಾದೃಷ್ಟಿಯುಳ್ಳ ಸಂತರಿಗೆ ಅಭೇದದರ್ಶನ. ಭೇದದಲ್ಲಿಯೂ ಅಭೇದವನ್ನು, ವೈವಿಧ್ಯತೆಯಲ್ಲಿಯೂ ಏಕತೆಯನ್ನು ಕಾಣುವ ಮಹರ್ಷಿಗಳವರು.

ಅಲ್ಲಮ ಪ್ರಭುದೇವರು ಪ್ರಜ್ಞಾದೃಷ್ಟಿಯಿಂದ ಪರವಸ್ತುವನ್ನು ಕಂಡ ಪುಣ್ಯಪುರುಷರು. ಅವರು ಅಗೋಚರವೂ ಅಗಮ್ಯವೂ ಆದ ಸತ್ಯದ ದರ್ಶನ ಮಾಡಿಕೊಳ್ಳುವ ಸುಲಭೋಪಾಯವನ್ನಿಲ್ಲಿ ಕಂಡು ಅರುಹಿದ್ದಾರೆ.

**ಕಂಡುದ ಹಿಡಿಯಲೊಲ್ಲದೆ**
**ಕಾಣದುದನರಸಿ ಹಿಡಿದಿಹೆನೆಂದಡೆ**
**ಸಿಕ್ಕದೆಂಬ ಬಳಲಿಕೆಯ ನೋಡಾ !**
**ಕಂಡುದನೆ ಕಂಡು ಗುರುಪಾದವ ಹಿಡಿದಲ್ಲಿ**
**ಕಾಣದುದ ಕಾಣಬಹುದು ಗುಹೇಶ್ವರ.**

ವಿಶಾಲವಾದ ಈ ಸಚರಾಚರ ಪ್ರಪಂಚ ನಮ್ಮ ಹೊರಗಣ್ಣಿಗೆ ಕಾಣುತ್ತದೆ. ಆದರೆ ಇದಕ್ಕೆ ಕಾರಣವಾದ ಪರವಸ್ತು, ಪರಮಾತ್ಮ ಮಾತ್ರ ನಮ್ಮ ಕಣ್ಣಿಗೆ ಕಾಣನು. ಅದರರ್ಥ ಪರಮಾತ್ಮನು ಮರೆಯಾಗಿದ್ದಾನೆಂದಲ್ಲ. ಮರೆಯಾಗಿರಲು ಅವನೇನು ನಮಗೆ ಹೆದರುವನೆ? ಇಲ್ಲ. ಆತ ನಿರ್ಗುಣ ನಿರಾಕಾರನಾಗಿರುವುದರಿಂದ ಕಾಣನು. ಅದು ಆತನ ಸ್ವರೂಪ.

ಕಾಣದುದನ್ನು ಹುಡುಕಿ ಹಿಡಿಯುತ್ತೇನೆಂದರೆ ಅದು ಹುರುಳಿಲ್ಲದ ಹವ್ಯಾಸ. ಅಲ್ಲಿ ಬರಿ ಆಯಾಸ, ಬಳಲಿಕೆ ನಮಗೆ ಕಾದಿದೆ. ಅದನ್ನೊಂದು ಉಪಾಯದಿಂದ ಕಾಣಬೇಕಷ್ಟೆ. ರೇಖಾಗಣಿತದಲ್ಲಿ ಬಿಂದುವಿನ ಪರಿಕಲ್ಪನೆ ಬಹು ಸೊಗಸಾಗಿದೆ. ಲಾಕ್ಷಣಿಕರ ಪ್ರಕಾರ 'ಉದ್ದಗಲದಪ್ಪಗಳಿಲ್ಲದ್ದು ಬಿಂದು.' ಅಂಥ ಪರಿಶುದ್ಧ ಬಿಂದುವನ್ನು ನಾವೆಂದೂ ನೋಡಲಾರೆವು. ಅದಕ್ಕಾಗಿ ನಾವು ಒಂದು ಸಾಂಕೇತಿಕಬಿಂದುವನ್ನು ಕಲ್ಪಿಸುತ್ತೇವೆ. ಅದು ಬಿಂದುವಿನ ಆಭಾಸ ಅಥವಾ ಛಾಯೆ ಮಾತ್ರ. ಈ ಕಾಲ್ಪನಿಕ ಬಿಂದುವಿನ ಸಹಾಯದಿಂದ ಕಲ್ಪನಾತೀತ ನಿಜಬಿಂದುವನ್ನು ಅರಿಯುತ್ತೇವೆ. ಗಣಿತ ಲೋಕದಲ್ಲಿ ಮುಂದುವರಿಯುತ್ತೇವೆ.

ಶಿವಯೋಗದಲ್ಲಿ ಲಿಂಗವು ಕಾಣುವ ಬಿಂದು. ದೇವನು ಕಾಣದ ಬಿಂದು. ಕಾಣುವ ಈ ಲಿಂಗವನ್ನು ಹಿಡಿದು ಕಾಣದ ಮಹಾಲಿಂಗವನ್ನು, ಮಹಾದೇವನನ್ನು ಕಾಣುತ್ತೇವೆ.

ಇಷ್ಟಲಿಂಗವನ್ನು ತದೇಕಚಿತ್ತದಿಂದ ನೋಡುತ್ತಾ ಹೋದಂತೆ ಲಿಂಗ ಉಳಿದು ಬಾಹ್ಯಜಗತ್ತೆಲ್ಲ ಮರೆಯಾಗುತ್ತದೆ. ಆ ಲಿಂಗವು ಕಣ್ಣು ತುಂಬಿಕೊಳ್ಳುತ್ತದೆ. ಅದು ಹಾಗೆ ನಮ್ಮೊಳಗೆ ಪ್ರವೇಶಿಸಿ ಮನಸ್ಸನ್ನೆಲ್ಲ ಆವರಿಸುತ್ತದೆ. ಲಿಂಗವು ಮಾನಸಿಕರೂಪ ಪಡೆಯುತ್ತದೆ. ಇದೆ ಪ್ರಾಣಲಿಂಗ. ಸಾಧನೆ ಮುಂದುವರಿದಂತೆ ಲಿಂಗದ ಆ ಮಾನಸಿಕ ರೂಪವೂ ಮರೆಯಾಗುತ್ತದೆ. ಲಿಂಗದ ಭಾವ ಮಾತ್ರ ಉಳಿಯುತ್ತದೆ. ಅದು ಭಾವಲಿಂಗ. ಲಿಂಗದ ಭಾವವೂ ಮರೆಯಾಗಿ ಕೇವಲ ಅದರ







ನಿಸ್ಸೀಮ ಅಸ್ತಿತ್ವ ಭಾನಮಾತ್ರ ಉಳಿಯುತ್ತದೆ. ಅದೇ ಮಹಾಲಿಂಗ ಅಥವಾ ಪರಮಸತ್ಯ.

ಹೀಗೆ ಕಾಣುವುದನ್ನು ಹಿಡಿದು, ಕಾಣದುದನ್ನು ಕಾಣುವುದೇ ಜಾಣತನ. ಕಾಣುವುದೇ ದೇವರಲ್ಲ. ಕಾಣುವ ಈ ಲಿಂಗವನ್ನೋ ಗುರುಮೂರ್ತಿಯ ಪಾದವನ್ನೋ ಹಿಡಿದು ಕಾಣದ ದೇವನನ್ನರಿಯಬೇಕು. ಗುರುವು ಕಾಣುವ, ಕೇಳುವ, ಹೇಳುವ ಜೀವಂತಭಗವಂತ. ಆತ ನಡೆಲಿಂಗ, ನುಡಿಲಿಂಗ. ಕಾಣದ ದೇವನನ್ನು ತನ್ನಂತರಂಗದಿ ಅವಧರಿಸಿದ ಮಹಾತ್ಮ. ಕಾಣುವ ಈ ಮಹಾತ್ಮನ ಪಾದವನ್ನು ಹಿಡಿದು ಕಾಣದ ಪರಮಾತ್ಮನನ್ನರಿಯುವುದೇ ಅನಾರೆಂಬುದನ್ನರಿಯುವ ಸಾಧನೆ. ಹಾಗಲ್ಲದೆ ಕಣ್ಣಿಗೆ ಕಾಣದ ದೇವನನ್ನು ಕಾಣಲೇಬೇಕೆಂದು ಬೆಟ್ಟಹಾರಿದರೆ, ಸಾಗರಕ್ಕೆ ದುಮುಕಿದರೆ ಆತನೇನು ಕಾಣುವನೆ ? ಇದಕ್ಕೊಂದು ದೃಷ್ಟಾಂತ.

ಜಪಾನ್ ದೇಶದಲ್ಲಿ ಫ್ಯೂಜಿಯಾಮಾ ಎಂಬ ಒಂದು ಬೆಟ್ಟ. ಆ ಬೆಟ್ಟದಡಿಯಲ್ಲಿ ಒಂದು ಬೌದ್ಧಮಠ. ಆ ಮಠದಲ್ಲಿ ಒಬ್ಬ ಝೆನ್ ಅನುಭಾವಿಕ ಗುರು. ಒಂದು ದಿನ ಒಬ್ಬ ವಿದ್ವಾಂಸ ಬಂದು ಗುರುಗಳಿಗೆ ನಮಸ್ಕರಿಸಿ ಕೇಳಿದ, "ಪೂಜ್ಯರೆ, ನನಗೆ ಭಗವಂತನ ಮಾರ್ಗ ತೋರಿಸಿರಿ."

"ಈ ಬೆಟ್ಟದ ಮಾರ್ಗ ಹಿಡಿದು ಹೋಗು" ಎಂದರು ಗುರುಗಳು.

"ಇದು ಬೆಟ್ಟಕ್ಕೆ ಹೋಗುವ ಮಾರ್ಗ. ಭಗವಂತನ ಕಡೆಗೆ ಹೇಗೆ ಹೋಗುತ್ತದೆ? ಸಾಧ್ಯವಿಲ್ಲ" ಎಂದನಾತ.

"ಹೀಗೆ ಸಂಶಯ ತಾಳಿದರೆ, ನೀನು ಈ ಜಗತ್ತಿನಲ್ಲಿ ಯಾವ ದಾರಿ ಹಿಡಿದು ಹೋದರೂ ನಿನಗೆ ದೇವರು ಕಾಣಿಸನು. ಒಮ್ಮೆ ಶ್ರದ್ಧೆಯಿಂದ ಈ ಬೆಟ್ಟದ ದಾರಿ ಹಿಡಿದು ನೋಡು" ಎಂದರು ಗುರುಗಳು.

ವಿದ್ವಾಂಸ ವಿಧಿಯಿಲ್ಲದೆ ಒಲ್ಲದ ಮನಸ್ಸಿನಿಂದಲೇ ಬೆಟ್ಟದ ದಾರಿ ಹಿಡಿದು ಹೋದ. ಗುರುಗಳ ಮಾತನ್ನು ಪರೀಕ್ಷಿಸಬೇಕೆಂದು; ದೇವರನ್ನು ಕಾಣಬೇಕೆಂದಲ್ಲ.

ವಿದ್ವಾಂಸ ಬಹು ಎತ್ತರದ ಬೆಟ್ಟವನ್ನು ಹೇಗೋ ಪ್ರಯಾಸದಿಂದ ಏರಿದ. ಬೆಟ್ಟದ ತುಟ್ಟತುದಿಯ ಮೇಲೆ ನಿಂತು ನೋಡಿದ, ಪರಮಾಶ್ಚರ್ಯ ! ಬೆಟ್ಟ ಕಾಣಲಿಲ್ಲ. ವಿಶಾಲವಾದ ವಿಶ್ವ ಕಂಡಿತು-ತಕ್ಷಣವೇ ಆತನಿಗೆ ಹೊಳೆಯಿತು.

'ಬೆಟ್ಟ ನೋಡಿದಾಗ ವಿಶ್ವ ಕಂಡಿತು. ಇನ್ನು ವಿಶ್ವನೋಡಿದಾಗ ವಿಶ್ವಾತೀತವಸ್ತು ಕಂಡೇ ಕಾಣುತ್ತದೆ!'

ಆತ ಬೆಟ್ಟದ ಬಂಡೆಯ ಮೇಲೆ ಗಟ್ಟಿಯಾಗಿ ಕುಳಿತ. ಸುತ್ತ ನೋಡಿದ. ವಿಶಾಲವಾಗಿ ಹರಡಿದ ಭೂಮಿ. ಭೂಮಿಯನೆಲ್ಲ ಬಾಚಿ ನಿಂತಿರುವ ಕೊನೆ ಮೊದಲಿಲ್ಲದ ಶುಭ್ರಾಗಸ. ಅಲ್ಲಿ ತೇಲಿಬರುವ ತಿಳಿಯಾದ ಮೇಘರಾಶಿ. ಅಡಿಯಲ್ಲಿ ಹಸಿರು ಹಾಸಿದ ವನಸಿರಿ.

ಅದನ್ನೆಲ್ಲಾ ನೋಡುತ್ತಾ ಹೋದಂತೆ ಅವನ ಮನವೂ ಅನಂತಾಗಸದಂತೆ ವಿಶಾಲವೂ, ಪರಿಶುಭ್ರವೂ, ಪ್ರಶಾಂತವೂ ಆಗಿತ್ತು. ಕೊನೆಗೆ ಆತ ನೋಡುವುದನ್ನೆಲ್ಲ ನಿಲ್ಲಿಸಿ ಧ್ಯಾನಸಕ್ತನಾದ. ಅದೇ ಕ್ಷಣ ಆತನಿಗೆ ನಿರ್ವಾಣದ ಅನುಭೂತಿಯಾಗಿತ್ತು. ಆತ ಕಾಣುವ ದಾರಿಯನ್ನು ಹಿಡಿದು ಹೋಗಿ ಕಾಣುದುದನ್ನು ಕಂಡಿದ್ದ.

ಹೀಗೆ ನಮ್ಮ ಮನಸ್ಸು ಅಮನಸ್ಕವಾಗಬೇಕು. ಬರಿದಾಗಬೇಕು. ನಾವು ನಮ್ಮೆಲ್ಲ ಅನಂತ ಆಶೆ-ಆಕಾಂಕ್ಷೆಗಳನ್ನು ಚೆಲ್ಲಿ ಬಿಡಬೇಕು. ಮನದಲ್ಲಿರುವ ಚಿತ್ರವಿಚಿತ್ರವಾದ ಪ್ರಾಪಂಚಿಕ ಕಲ್ಪನೆಗಳ ಧೂಳನ್ನು ನಿರ್ದಾಕ್ಷಿಣ್ಯವಾಗಿ ಕೊಡವಬೇಕು. ಅದೇ ಕ್ಷಣ ನಿರ್ಮಲವಾದ ಆ ಮಲಿನವಲ್ಲದ ಮನದಲ್ಲಿ ಸತ್ಯದ ಬೆಳಕು ಹರಿದು ಬರುತ್ತದೆ. ಆನಾರೆಂಬುದರ ಅರುಣೋದಯವಾಗುತದೆ.

ಆದರೆ ನಮ್ಮ ಮನದಲ್ಲಿ ನೂರಾರು ವಿಚಿತ್ರ ವಿಚಾರಗಳು ಆಸೆ ಆಮಿಷಗಳು ತುಂಬಿಕೊಂಡಿವೆ. ಅದು ಪ್ರಾಪಂಚಿಕ ಬಂಧನಕ್ಕೆ ಒಳಗಾಗಿದೆ. ಪತಂಗ (ಗಾಳಿಪಟ) ಎಷ್ಟು ಎತ್ತರಕ್ಕೆ ಏರಿದರೂ, ಹಾರಿದರೂ ಅದು ಅಂತರಿಕ್ಷವನ್ನು ತಲುಪದು. ಅಲ್ಲಿ ಶಾಶ್ವತವಾಗಿ ನಿಲ್ಲದು. ಕಾರಣ ಈ ಪತಂಗದ ಸೂತ್ರವು ಅದನ್ನು ಹಾರಿಬಿಟ್ಟವನ ಕೈಯಲ್ಲಿದೆ. ಯಾವುದೇ ಕ್ಷಣ ಆತ ಪತಂಗವನ್ನು ಕೆಳಗಿಳಿಸಬಲ್ಲ. ಇಂಥ ಪತಂಗಕ್ಕೆ ಸ್ವಾತಂತ್ರ್ಯವೆಂಬುದು ಕನಸಿನ ಮಾತು.







ಹಾಗೆಯೇ ನಮ್ಮ ಮನವೆಂಬ ಪತಂಗವನ್ನು ಈ ಪ್ರಪಂಚದಲ್ಲಿ ಯಾವುದೋ ಕಾಣದ ಸೂತ್ರ ಕಟ್ಟಿ ಹಾಕಿದೆ. ಎಂಥವರನ್ನು ಅದು ಬಂಧಿಸಿ ಬಿಟ್ಟಿದೆ.

ಅಲ್ಲೊಂದು ಸುಂದರ ಮಂದಿರ. ಅದರಲ್ಲಿ ಒಬ್ಬ ಪಂಡಿತಪೂಜಾರಿ. ಎರಡು ಮೂರು ದಶಕಗಳ ಕಾಲ ನಿಷ್ಠೆಯಿಂದ ದೇವರ ಪೂಜಾಸೇವೆ ಮಾಡಿಕೊಂಡಿದ್ದ. ಈಗ ಆತನಿಗೆ ೫೦-೬೦ ವರ್ಷಗಳ ಮಧ್ಯಮ ವಯಸ್ಸು.

ಒಂದು ದಿನ ಒಬ್ಬ ಬಡಭಕ್ತ ಮಂದಿರಕೆ ಬಂದ. ಆತನ ತಾಯಿ ದೈವಭಕ್ತಳಾಗಿದ್ದಳು. ಅವಳು ತನ್ನ ಆಯುಷ್ಯದ ಉದ್ದಕ್ಕೂ ಕೂಲಿ-ನಾಲಿ ಮಾಡಿ ಗಳಿಸಿದ್ದರಲ್ಲಿ ಒಂದಿಷ್ಟು ಹಣ ಉಳಿಸಿದ್ದಳು. ಅದನ್ನು ಮಗನ ಕೈಗೆ ಕೊಟ್ಟು ಹೇಳಿದಳು. "ಮಗನೇ, ಇದರಿಂದ ಮಂದಿರದ ಮಹಾದೇವನಿಗೆ ಚಿನ್ನದ ಕಿರೀಟ ಮಾಡಿಸಿ ಹಾಕು." ಹಾಗೆ ಹೇಳಿ ಮಗನಿಂದ ವಚನವನ್ನು ಪಡೆದು ಆ ಮಹಾತಾಯಿ ಅಸುನೀಗಿದಳು.

ಅವಳಿತ್ತ ಹಣ ಚಿನ್ನದ ಕಿರೀಟಕ್ಕೆ ಸಾಲದಾಗಿತ್ತು. ಮಾತೆಯ ಮಾತನ್ನು ಪೂರೈಸುವುದು ಮಗನ ಕರ್ತವ್ಯ. ಅವನಾದರೂ ಹತ್ತಾರು ವರ್ಷ ಶ್ರದ್ಧೆಯಿಂದ ದುಡಿದು ಗಳಿಸಿದ. ತಾಯಿಯ ಹಣಕ್ಕೆ ತನ್ನ ಭಕ್ತಿಯನ್ನೂ ಸೇರಿಸಿದ. ಚಿನ್ನದ ಕಿರೀಟ ಮಾಡಿಸಿದ.

ಒಂದು ದಿನ ಸಂಜೆ ಮಂದಿರಕ್ಕೆ ಬಂದು ಪೂಜಾರಿಗೆ ಹೇಳಿದ. "ಇದು ನನ್ನ ತಾಯಿಯ ಅಂತಿಮ ಆಸೆ. ಈ ಕಿರೀಟ ತೆಗೆದುಕೊಳ್ಳಿ, ದೇವರ ತಲೆಗಿಡಿ. ಒಂದು ಕ್ಷಣ ನಾನದನ್ನು ಕಣ್ತುಂಬ ನೋಡಬೇಕು" ಎಂದು ಸುಂದರವಾದ ಆ ಚಿನ್ನದ ಕಿರೀಟವನ್ನು ಪೂಜಾರಿಯ ಕೈಗಿತ್ತು ವಂದಿಸಿದ.

ಪಂಡಿತಪೂಜಾರಿಗೆ ಅಪಾರ ಸಂತಸ, ಭಕ್ತನನ್ನು ಮಂದಿರದ ಒಳಗೆ ಕರೆದೊಯ್ದು, ಆ ಚಿನ್ನದ ಕಿರೀಟವನ್ನು ದೇವರ ತಲೆಗಿಟ್ಟು, ಪೂಜಿಸಿ, ತೀರ್ಥಪ್ರಸಾದ ಕೊಟ್ಟ, ಭಕ್ತನು ಭಾವಪರವಶನಾಗಿ ಕಿರೀಟಧಾರಿ ದೇವರಮೂರ್ತಿಯನ್ನು ನೋಡಿದ. ಹಲವು ದಿನಗಳ ಭಕ್ತಿಯ ಕನಸು ನನಸಾಗಿತ್ತು. ತಾಯಿಯ ಆತ್ಮಕ್ಕೆ ಶಾಂತಿ ದೊರಕಿತೆಂಬ ಭರವಸೆ ಮೂಡಿತ್ತು. ಆತ ದೇವರಿಗೆ, ಪೂಜಾರಿಗೆ ಸಂತಸದಿಂದ ವಂದಿಸಿ ಹಿಂದಿರುಗಿದ.

ಹೊತ್ತು ಮುಳುಗಿತ್ತು. ಪೂಜಾರಿಯ ಮನಸ್ಸು ಹೊಯ್ದಾಡಿತ್ತು. ಈ ಕಿರೀಟ ಯಾರೂ ನೋಡಿಲ್ಲ. ಭಕ್ತನೂ ಹೊರಟು ಹೋಗಿದ್ದಾನೆ. ಅವನ ಆಸೆ ಈಡೇರಿದೆ. ಅವನಿನ್ನು ತಿರುಗಿ ಬರುವ ಪ್ರಶ್ನೆಯೇ ಇಲ್ಲ. ಮಂದಿರದ ಲೆಕ್ಕಕ್ಕೂ ಸೇರಿಲ್ಲ. ಹೀಗಿರುವಾಗ ನಾನು ಇದನ್ನೇಕೆ ನನದಾಗಿಸಿಕೊಳ್ಳಬಾರದು? ಇಪ್ಪತ್ತೈದು ವರ್ಷಗಳ ನಂತರ ಇಂಥ ಅವಕಾಶ ದೊರಕಿದೆ ಎನ್ನುತ್ತ ಮಂದಿರದ ಬಾಗಿಲು ಹಾಕಿ ಮನೆಗೆ ನಡೆದ.

ರಾತ್ರಿ ನಿದ್ರೆ ಬರಲಿಲ್ಲ. ಮನಸ್ಸೆಲ್ಲಾ ಮಂದಿರದಲ್ಲೇ, ದೇವರ ಮೇಲಲ್ಲ ! ದೇವರ ತಲೆಯ ಕಿರೀಟದ ಮೇಲೆ !! ಮಧ್ಯರಾತ್ರಿ ಒಂದು ಗಂಟೆಗೆ ಎದ್ದ. ಮಂದಿರಕ್ಕೆ ಬಂದ. ಭಗವಂತ ನಸುನಗುತ್ತಲಿದ್ದ. ಅತ್ತ ಈತ ಗಮನಿಸಲಿಲ್ಲ. ಚಿನ್ನದ ಕಿರೀಟ ಎತ್ತಿಕೊಂಡು ಹೊರಬಿದ್ದ. ಎಂದೆಂದೂ ಹರಿಯದ ಆಶಾಪಾಶಕ್ಕೆ ಸಂಸಾರದ ಬಂಧನಕ್ಕೆ ಒಳಗಾಗಿದ್ದ.

ಪಂಡಿತಪೂಜಾರಿ ಇಪ್ಪತ್ತೈದು ವರ್ಷ ಮಂದಿರದ ಸೇವೆ ಮಾಡಿದ್ದ. ಭಗವಂತನ ಪವಿತ್ರಸಾನ್ನಿಧ್ಯದಲ್ಲಿದ್ದ. ನಾನೆಂದೂ ಸಂಸಾರದ ಬಂಧನಕ್ಕೆ ಒಳಗಾಗಲಾರೆನು ಎಂದುಕೊಂಡಿದ್ದ. ಆದರೂ ಕಾಣದ ಕೈಯಿಂದ ಬಂಧಿಸಲ್ಪಟ್ಟಿದ್ದ. ವಿದ್ವಾಂಸರಿಗೂ ಕಾಣಿಸದೇ ಇರಬೇಕಾದರೆ ಈ ಆಶೆಯ ಪಾಶ ಆದೆಷ್ಟು ಸೂಕ್ಷ್ಮವಾಗಿರಬೇಡ !

ಇಂಥ ನೂರು ಸಾವಿರ ತರಹದ ಆಸೆಯ ಪಾಶ ನಮ್ಮನ್ನು ಸಂಸಾರಕ್ಕೆ ಬಂಧಿಸಿದೆ. ದೇವರೇ ಪ್ರತ್ಯಕ್ಷ ಈ ಭುವಿಗೆ ಬಂದರೂ ಆತನೂ ಈ ಬಂಧನಕ್ಕೆ ಒಳಗಾಗದೇ ಇರಲಾರನೇನೋ ! ಅದೇ ಮಾಯೆ.

ಮಾಯೆಯು ಹುಡುಕಿದರೆ ದೊರಕುವುದಿಲ್ಲ. ಇಲ್ಲವೆಂದು ಸುಮ್ಮನಿದ್ದರೆ ನಮ್ಮನ್ನು ಬಂಧಿಸದೆ ಬಿಡುವುದಿಲ್ಲ. ಆದರೆ ಈ ಮಾಯೆಯ ಸ್ವರೂಪವನ್ನು ಅರಿಯಲು ಹೋದರೆ ಅದು ಉಳಿಯುವುದಿಲ್ಲ. ಆದ್ದರಿಂದ ಈ ಮಾಯೆಯ ಸ್ವರೂಪವನ್ನರಿಯುವುದೇ ಅನಾರೆಂಬುದನ್ನು ಅರಿಯುವುದಕ್ಕೆ, ಕಾಣದುದನ್ನು ಕಾಣುವುದಕ್ಕೆ ಕಾರಣವಾಗುತ್ತದೆ.

(ಕೃಪೆ: ನಾನಾರು?)







ಸಾಂದರ್ಭಿಕ

# ವಿವೇಕವಾಣಿಯಲ್ಲಿ ವಿಶ್ವ ತಬ್ಬುವ ವಿಶ್ವಾತ್ಮಭಾವ

– ಸ್ವಾಮಿ ವೀರೇಶಾನಂದ ಸರಸ್ವತೀ *



**'ಯದೇವ ವಿದ್ಯಯಾ ಕರೋತಿ, ಶ್ರದ್ಧಯಾ, ಉಪನಿಷದಾ, ತದೇವ ವೀರ್ಯವತ್ತರಂ ಭವತಿ'** ಎಂದಿದೆ ಉಪನಿಷತ್ತು. ಅಂದರೆ 'ಯಾವುದೇ ಕಾರ್ಯವನ್ನು ಜ್ಞಾನಪೂರ್ವಕವಾಗಿ, ಬದ್ಧತೆಯಿಂದ ಮತ್ತು ಧ್ಯಾನಪೂರ್ವಕವಾಗಿ ಕೈಗೊಂಡಾಗ ಮಾತ್ರವೇ ಅಂತಹ ಕಾರ್ಯವು ಅತ್ಯಧಿಕವೂ ಹಾಗೂ ಅತ್ಯುತ್ಕೃಷ್ಟವೂ ಆದ ಶಕ್ತಿಯನ್ನು ದಯಪಾಲಿಸುತ್ತದೆ.'

ಯಾವುದೇ ಕ್ಷೇತ್ರದಲ್ಲಿ ಮಾನವ ಸಮಾಜಕ್ಕೆ ಪ್ರಚೋದನೆ ನೀಡುತ್ತ ಪ್ರೇರಣಾದಾಯಕ ಬದುಕನ್ನು ದೊರಕಿಸಿಕೊಟ್ಟ ಚೈತನ್ಯಗಳು ಸ್ಮರಣೀಯವಾಗುತ್ತವೆ. ಆದ್ದರಿಂದಲೇ ಜಗತ್ತಿನ ಇತಿಹಾಸವು ಕೆಲವೇ ಕೆಲವು ವ್ಯಕ್ತಿಗಳ ಇತಿಹಾಸದಲ್ಲಿ ಬಿಂಬಿತವಾಗಿದೆ. ಆದರೆ ಅವರುಗಳು ಸಮಾಜ, ದೇಶ ಹಾಗೂ ಒಟ್ಟಾರೆಯಾಗಿ ಮಾನವ ಪ್ರಪಂಚಕ್ಕೆ ನೀಡಿದ ಕೊಡುಗೆ ಕೃತಜ್ಞತಾಪೂರ್ವಕವಾಗಿ ಸ್ಮರಣೀಯವಾಗುತ್ತದೆ.

ಚಾರಿತ್ರ್ಯಬಲದಿಂದ ಜಗತ್ತನ್ನು ಆಳಿದ ಮಹಾತ್ಮರಲ್ಲಿ ಸ್ವಾಮಿ ವಿವೇಕಾನಂದರು ಅಗ್ರಗಣ್ಯರು. ಅವರಿತ್ತ ಮಾನವ ನಿರ್ಮಾಣ ಧರ್ಮ ಮತ್ತು ಮಾನವ ನಿರ್ಮಾಣ ಶಿಕ್ಷಣದ ಚಿಂತನೆಗಳು ವಿಶ್ವದ ಗಮನ ಸೆಳೆದವು ! ವಿವೇಕಾನಂದರನ್ನು ಕುರಿತಾದ ಮಾತೊಂದಿದೆ: 'ಆಧ್ಯಾತ್ಮಿಕ ಮತ್ತು ಸಾಮಾಜಿಕ ಪರಿಣಾಮಕಾರಿತ್ವವೆರಡನ್ನೂ ಹೊಂದಿರುವ ಒಂದು 'ಜೀವನಸ್ಥಿತಿ'ಯಾಗಿ ಅವರು ಸಂನ್ಯಾಸವನ್ನು ರೂಪಿಸಿದರು! ಅವರ ವಾಣಿಯಲ್ಲಿ ಜೀವಂತಿಕೆ ಇದೆ. ಕುಸಿದು ಬೀಳುತ್ತಿದ್ದ ಮಾನವನು ಎದ್ದು ನಿಂತು, ಮುನ್ನಡೆದು, ಹೊರನಡೆದು, ಒಳನಡಿಗೆಯ ಮೂಲಕ ದೈವದೆಡೆಗೆ ಸಾಗುವ ಜೀವನಕಲೆಯನ್ನಿತ್ತು ಅವರು ರಕ್ಷಿಸಿದರು. ವಿವೇಕಾನಂದರ ಜೀವನವು ಜಗತ್ತಿಗೆ 'ನಾಗರಿಕತೆಗಳು ಅಥವಾ ಸಾಮಾಜಿಕ ವ್ಯವಸ್ಥೆಗಳು ಉಳಿಯುವುದು ಸಾರ್ವಕಾಲಿಕ ಜಾಗತಿಕ ಸತ್ಯದ ಆಧಾರದ ಮೇಲೆಯೇ ಹೊರತು ಜಗತ್ತಿಗೆ ಅನ್ವಯವಾಗಲು ಸಾಧ್ಯವಿಲ್ಲದ ಪ್ರಾದೇಶಿಕ ಬಣಗಳ ಶಾಸನಗಳಿಂದಲ್ಲ' ಎಂಬುದನ್ನು ಸಾಕ್ಷಾತ್ತಾಗಿ ಸಮರ್ಥಿಸಿತು!

ಸ್ವಾಮಿ ವಿವೇಕಾನಂದರನ್ನು ಅನಂತ ಶಕ್ತಿಯ ಸ್ವರೂಪ, ಸುಂಟರಗಾಳಿಯ ಸಂನ್ಯಾಸಿ, ಹಿಂದೂ ನೆಪೋಲಿಯನ್, ಯೋಧ ಸಂನ್ಯಾಸಿ, ಮುಂತಾದ ಹೆಸರುಗಳಿಂದ ವಿಶ್ವವು ಗುರ್ತಿಸಿದೆ. 'ನರೇಂದ್ರನಾಥನು ಜಗತ್ತಿಗೆ ಬೋಧನೆ ಮಾಡುತ್ತಾನೆ' ಎಂದಿದ್ದರು ಗುರುದೇವ ಶ್ರೀರಾಮಕೃಷ್ಣರು. 'ಇಂತಹ ಮೇಧಾವಿ ವಿದ್ಯಾರ್ಥಿಯನ್ನು ನಾನು ಭಾರತ ಹಾಗೂ ಜರ್ಮನ್ ವಿಶ್ವವಿದ್ಯಾಲಯದಲ್ಲೂ ಕಂಡಿರಲಿಲ್ಲ'

---

* ಅಧ್ಯಕ್ಷರು, ರಾಮಕೃಷ್ಣ-ವಿವೇಕಾನಂದ ಆಶ್ರಮ, ತುಮಕೂರು

ಎಂದಿದ್ದರು ಪ್ರಾಧ್ಯಾಪಕ ವಿಲಿಯಂ ಹೇಸ್ಟಿ. 'ಭಾರತದಿಂದ ಬಂದಿರುವ ಈ ಯುವ ಸಂನ್ಯಾಸಿಯ ಬೌದ್ಧಿಕತೆಯನ್ನು ಅಮೇರಿಕದ ಎಲ್ಲ ವಿಶ್ವವಿದ್ಯಾಲಯಗಳ ಪ್ರಾಧ್ಯಾಪಕರೆಲ್ಲರ ಒಟ್ಟು ಬೌದ್ಧಿಕ ಸಾಮರ್ಥ್ಯವೂ ಸರಿಗಟ್ಟಲಾರದು ! ಇಂತಹ ಸಂತನನ್ನು ಕಳೆದ ಕೆಲವು ಶತಮಾನಗಳಲ್ಲಿ ಅಮೇರಿಕಾ ಕಂಡಿರಲಿಲ್ಲ!' ಎಂದಿದ್ದಾರೆ ಅಮೇರಿಕಾದ ಹಾರ್ವರ್ಡ್ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಡಾ. ಜಾನ್ ಹೆನ್ರಿ ರೈಟ್, 'ಅಮೇರಿಕನ್ ನೆಲವನ್ನು ಕಂಡುಹಿಡಿದದ್ದು ಕೊಲಂಬಸ್ ಎಂಬುದರಲ್ಲಿ ಸಂದೇಹವೇ ಇಲ್ಲ; ಆದರೆ ಅಮೇರಿಕನ್ ಆತ್ಮವನ್ನು ಆವಿಷ್ಕರಿಸಿದ್ದು ಮಾತ್ರ ಸ್ವಾಮಿ ವಿವೇಕಾನಂದರೇ' ಎಂದು ಉದ್ಗರಿಸಿದರು ಅಮೇರಿಕಾದ ಪ್ರಜ್ಞಾವಂತ ಚಿಂತಕರು.

'ಸ್ವಾಮಿ ವಿವೇಕಾನಂದರು ಷಿಕಾಗೋ ವಿಶ್ವಧರ್ಮ ಸಮ್ಮೇಳನದಲ್ಲಿ ನೀಡಿದ ಅತ್ಯುತ್ಕೃಷ್ಟ ಸಂದೇಶಗಳು ಬಹುತೇಕ ಮೃತಪ್ರಾಯವೆನಿಸಿದ್ದ ಜಗತ್ತಿನ ರಾಷ್ಟ್ರಗಳಿಗೆ ಚೈತನ್ಯ ನೀಡಿತಲ್ಲದೆ ತಮ್ಮ ತಮ್ಮ ಅಸ್ತಿತ್ವ ಹಾಗೂ ಅವಶ್ಯಕತೆಗಳನ್ನು ಜಾಗತಿಕ ಮಟ್ಟದಲ್ಲಿ ಸಾಬೀತುಪಡಿಸುವ ಮಹಾಪ್ರಯಾಣಕ್ಕೆ ಮುನ್ನುಡಿ ಆಯಿತು. 'ಇತಿಹಾಸದ ಬಲಿಪಶುಗಳು' ಆಗ ಹೊರಟಿದ್ದ ರಾಷ್ಟ್ರಗಳು 'ಇತಿಹಾಸದ ಸೃಷ್ಟಿಕರ್ತರು' ಆಗಲು ಸ್ಫೂರ್ತಿ ಪಡೆದವು' ಎಂದು ಅಮೇರಿಕಾ ಮೊದಲಾದ ಮುಂದುವರಿದ ರಾಷ್ಟ್ರಗಳ ಮಾನವತಾವಾದಿಗಳು ಅಭಿಪ್ರಾಯಪಟ್ಟರು. ಬಾವಿಯ ಕಪ್ಪೆಯು ಸಮುದ್ರದ ಕಪ್ಪೆಯಾಗಿ ಬೆಳವಣಿಗೆ ಸಾಧಿಸ ಬೇಕಾದ ನೀತಿಪಾಠವನ್ನು ವಿವೇಕಾನಂದರು ಹೃದಯಂಗಮವಾಗಿ ಜಗತ್ತಿಗೆ ಬೋಧಿಸುವಲ್ಲಿ ಯಶಸ್ವಿಯಾದರು.

ಅಮೇರಿಕಾ ಪ್ರತಿಕೆಯೊಂದರ ಸಂಪಾದಕೀಯ ಹೀಗೆ ಬರೆದಿತ್ತು: 'ಸ್ವಾಮಿ ವಿವೇಕಾನಂದರನ್ನು ನೋಡುವ, ಅವರ ಭಾಷಣವನ್ನು ಕೇಳುವ ಅವಕಾಶವನ್ನು ಬುದ್ಧಿವಂತನಾದ ಯಾವನೂ ಕಳೆದುಕೊಳ್ಳಬಾರದು. ಪ್ರತಿಯೊಬ್ಬ ಬುದ್ಧಿಜೀವಿಯೂ ವಿವೇಕಾನಂದರ ವ್ಯಕ್ತಿತ್ವವನ್ನು ಅಧ್ಯಯನ ಮಾಡಬೇಕು.'

ಅಮೇರಿಕಾದ ಮಹಿಳೆಯೊಬ್ಬಳು ಹೀಗೆ ಉದ್ಗರಿಸುತ್ತಾಳೆ: 'ಓಹ್, ವಿವೇಕಾನಂದರ ದಿವ್ಯ ಬೋಧನೆಗಳೆಂಥವು! ಅಲ್ಲಿ ಅರ್ಥಹೀನವಾದದ್ದು ಒಂದೂ ಇಲ್ಲ. ಇನ್ನು ನಾನು ಹಳೆಯ 'ನಾನು' ಆಗಿ ಉಳಿದಿಲ್ಲವೆಂದು ಅನ್ನಿಸುತ್ತಿದೆ. ಏಕೆಂದರೆ, ನಾನು ಪರಮಸತ್ಯದ ಇಣುಕುನೋಟವೊಂದನ್ನು ಪಡೆದುಕೊಂಡಿದ್ದೇನೆ.'

**ಲಂಡನ್ನಿನ ಮಹಿಳೆಯೊಬ್ಬಳ ಅಭಿಪ್ರಾಯ ಉಲ್ಲೇಖಾರ್ಹ** : 'ಚರ್ಚುಗಳಲ್ಲಿ ನಡೆಯುವ ಎಷ್ಟೋ ಆರಾಧನೆಗಳಲ್ಲಿ ನಾನು ಜೀವನದುದ್ದಕ್ಕೂ ಭಾಗವಹಿಸಿದ್ದೇನೆ, ಉಪನ್ಯಾಸಗಳನ್ನು ಕೇಳಿದ್ದೇನೆ. ಆದರೆ ನನ್ನ ಬಹಳಷ್ಟು ಪ್ರಶ್ನೆಗಳು ಪ್ರಶ್ನೆಗಳಾಗೇ ಉಳಿದದ್ದು ಸತ್ಯ. ಕೆಲವೊಮ್ಮೆ ಧರ್ಮ ಎಂಬುದು ಸತ್ವಹೀನ, ಸಪ್ಪೆ ವಿಷಯ ಎಂದೇ ತೀರ್ಮಾನಕ್ಕೆ ಬರುತ್ತಿದ್ದೆ. ಆದರೆ, ಸ್ವಾಮಿ ವಿವೇಕಾನಂದರ ಮಾತುಗಳನ್ನು ಕೇಳಿದಾಗಿನಿಂದ, ಧರ್ಮದೊಳಕ್ಕೆ ಹೊಸ ಬೆಳಕೊಂದು ಹರಿದು ಬಂದಂತೆ ತೋರುತ್ತಿದೆ. ಧರ್ಮವು ಜೀವಂತ, ಅದು ಸತ್ಯ ! ಈಗ ಅದಕ್ಕೊಂದು ಹೊಸ ಆಹ್ಲಾದಕರ ಅರ್ಥವಿದೆ; ಮತ್ತು ಧರ್ಮದ ಸ್ವರೂಪವು ನನ್ನ ಪಾಲಿಗೆ ಸಂಪೂರ್ಣವಾಗಿ ಪರಿವರ್ತಿತವಾಗಿ ಕಾಣುತ್ತಿದೆ. ನಿಜ ಹೇಳಬೇಕೆಂದರೆ ಕ್ರೈಸ್ತಳಾದ ನನಗೆ ನನ್ನ ಧರ್ಮವು ಹಿಂದೂ ಧರ್ಮದ ಬೆಳಕಿನಲ್ಲಿ ಸುಸ್ಪಷ್ಟವಾಯಿತು !'

ಬರೋಡಾದ ರಾಜರಾದ ಗಾಯಕವಾಡರು ಸ್ವಾಮಿ ವಿವೇಕಾನಂದರಿಂದ ಬಹಳಷ್ಟು ಪ್ರಭಾವಿತರಾಗಿದ್ದರು. 'ದೇಶದ ಉದ್ಧಾರಕ್ಕೆ ಶಿಕ್ಷಣವೊಂದೇ ಪರಿಹಾರ. ಬಡವ-ಬಲ್ಲಿದ, ಮೇಲು-ಕೀಳೆನ್ನದೆ ದೀನದಲಿತರನ್ನು ಮೊದಲ್ಗೊಂಡು ಸರ್ವರಿಗೂ ಶಿಕ್ಷಣ ನೀಡು' ಎಂದು ವಿವೇಕಾನಂದರಿತ್ತ ಆದೇಶಕ್ಕೆ ತಲೆಬಾಗಿದ ಗಾಯಕವಾಡ ಮಹಾರಾಜರು ನೂರಾರು ದಲಿತ ಮಕ್ಕಳ ಬದುಕಿಗೆ ಆಶಾಕಿರಣವಾದರು. ಗಾಯಕವಾಡರ ಪ್ರೋತ್ಸಾಹದಿಂದ ಶಿಕ್ಷಿತರಾದವರಲ್ಲಿ ಡಾ. ಬಿ.ಆರ್. ಅಂಬೇಡ್ಕರ್ ಪ್ರಮುಖರು. ಸ್ವತಂತ್ರ ಭಾರತದ ಉದಯ ಹಾಗೂ ಅಭ್ಯುದಯಕ್ಕೆ ಚಿಂತಿಸಿದ ಅವರು, 'ಮನುಷ್ಯನ ಜೀವನದಲ್ಲಿ ಉನ್ನತ ವಿಚಾರಗಳ ಬಗ್ಗೆ ಹಸಿವನ್ನು ಇರಿಸಿಕೊಳ್ಳುವುದು ಅತ್ಯಗತ್ಯ. ಇನ್ನೊಬ್ಬರಿಗಾಗಿ ದುಡಿಯುವುದು ಶ್ರೇಷ್ಠ. ಇನ್ನೊಬ್ಬರ ದುಡಿಮೆಗೆ ಕೈಚಾಚುವುದು ನಿಕೃಷ್ಟ. ಅಳತೆ ಇಲ್ಲದಿದ್ದರೆ ಔಷಧವೂ ವಿಷವಾಗುತ್ತದೆ! ಪ್ರಯತ್ನದಲ್ಲಿನ ವೈಫಲ್ಯ



ನಮಗೆ ನಿರಾಶೆ ತರಬಹುದೇನೋ, ಆದರೆ ಪ್ರಯತ್ನವೇ ಮಾಡದಿದ್ದರೆ ಅದು ನಾಶಕ್ಕೆ ಆಹ್ವಾನ.' ಮೊದಲಾದ ಚಿಂತನೆಗಳನ್ನು ಬದುಕಿನದ್ದಕ್ಕೂ ಸಾರಿದರು. ಸ್ಮೃತಿಗಳ ಬಗ್ಗೆ ತಮ್ಮ ಅಭಿಮತವನ್ನು ಅಂಬೇಡ್ಕರ್ ನಿಷ್ಠುರವಾಗಿ ಪ್ರತಿಪಾದಿಸಿದ್ದಾದರೂ ಸಂಸ್ಕೃತ ಭಾಷೆ 'ರಾಷ್ಟ್ರೀಯ ಭಾಷೆ' ಆಗಬೇಕೆಂದ ಮೊಟ್ಟಮೊದಲ ಸಂಸದರು ಅವರಾಗಿದ್ದರು.

ಹುಟ್ಟಿನಿಂದ ಕಾಯಸ್ಥರಾಗಿದ್ದ ಸ್ವಾಮೀಜಿಯವರು ದೇಶದ ಉದ್ದಗಲಕ್ಕೂ ಪ್ರಚಲಿತವಾಗಿದ್ದ ಜಾತಿ ವ್ಯವಸ್ಥೆಯ ಅನಾಗರಿಕ ಸನ್ನಿವೇಶಗಳನ್ನು ಕಣ್ಣಾರೆ ಕಂಡಿದ್ದಷ್ಟೇ ಅಲ್ಲದೆ ಸ್ವತಃ ಅನುಭವಿಸಿದರು ಕೂಡ. ಕೆಲವೊಂದು ಕಡೆ ಅವರು ದೇವಸ್ಥಾನದ ಒಳಹೋಗಲಾಗಲಿಲ್ಲ. ಆದರೆ ಅವರೆಂದೂ ಧರ್ಮದಿಂದ ಹೊರಹೋಗಲು ಚಿಂತಿಸಲಿಲ್ಲ. ಧಾರ್ಮಿಕ ವಿಚಾರಗಳಲ್ಲಿನ 'ಕಳೆ'ಯನ್ನೇ 'ಬೆಳೆ' ಎಂದು ಭ್ರಮಿಸಿದ್ದ ಸಮಾಜಕ್ಕೆ ಶುದ್ಧ ಹಾಗೂ ಪವಿತ್ರ ಧರ್ಮದ ಅರಿವು ಮೂಡಿಸಿದರು. ಅವರೆನ್ನುತ್ತಾರೆ : 'ಕೆಲವೊಮ್ಮೆ ಜಗತ್ತಿಗೆ ಅನ್ನಿಸಬಹುದೇನೋ ಧರ್ಮ ಮತ್ತು ಆಧ್ಯಾತ್ಮಿಕ ವಾತಾವರಣವು ನಾಶದ ಅಂಚಿಗೆ ಮುಟ್ಟುತ್ತಿದೆ, ಅವುಗಳ ಅಂತ್ಯ ಸಮೀಪಿಸಿದೆ ಎಂದು. ಆದರೆ ನಾನು ಹೇಳುತ್ತೇನೆ, ಇದು 'ಅಂತ್ಯ'ದ ಸೂಚಕವಲ್ಲ, 'ಆರಂಭ'ದ ಸ್ಪಷ್ಟ ಚಿಹ್ನೆ! ವಿಸ್ತೃತವೂ ಶುದ್ಧವೂ ಆದ ಧರ್ಮ ಮೌಲ್ಯಗಳು ಮಾನವ ಜೀವನದ ಪ್ರತಿಕ್ಷಣವನ್ನು ಆಕ್ರಮಿಸಿಕೊಂಡೇ ತಿರುತ್ತವೆ! ಅಲ್ಲದೆ ನಾವು ನಿಶ್ಚಯವಾಗಿ ತಿಳಿಯಬೇಕಾದದ್ದು ಏನೆಂದರೆ 'ಧರ್ಮ'ವು ಧೀರತೆಯನ್ನು ಅಪೇಕ್ಷಿಸುತ್ತದೆ. ಹೇಡಿಗಳಿಗಲ್ಲ ಧರ್ಮ ! 'ವಿಶ್ವವೆಲ್ಲವೂ ಸದ್ಗುಣಶೀಲ ದೇವರ ಕುರಿತಾಗಿಯೇ ನಿರಂತರವಾಗಿ ಬೋಧಿಸುತ್ತ ಬಂದಿದೆ. ನಾನು ಸದ್ಗುಣಶೀಲ ದೇವರು ಮತ್ತು ಪಾಪದ ದೇವರನ್ನು ಒಂದರಲ್ಲೇ ಬೋಧಿಸುತ್ತೇನೆ!' ಎಂದಿದ್ದಾರೆ.

## ಮೈಸೂರು ರಾಜರ ಮೇಲೆ ಪ್ರಭಾವ

**ಮೈಸೂರಿನ ಮಹಾರಾಜರಾಗಿದ್ದ ಚಾಮರಾಜೇಂದ್ರ ಒಡೆಯರ್‌ರು ಸ್ವಾಮಿ ವಿವೇಕಾನಂದರ ದಿವ್ಯ ಪ್ರಭಾವಕ್ಕೆ ಒಳಗಾಗಿದ್ದರು. ವಿವೇಕಾನಂದರ ಮೈಸೂರು ಭೇಟಿ ರಾಜಮನೆತನದ ಅಷ್ಟೇಕೆ ರಾಷ್ಟ್ರದ ಜೀವನದಲ್ಲಿ ಒಂದು ಅದ್ಭುತ ತಿರುವನ್ನೇ ನೀಡಿತು. ರಾಜ್ಯದಲ್ಲಿ ಶಿಕ್ಷಣ, ವಾಣಿಜ್ಯ ಕೈಗಾರಿಕೆ, ವಿಜ್ಞಾನ, ಸಮಾಜ ಸೇವಾ ಕಾರ್ಯಗಳಲ್ಲಿ ರಾಜರ ಅನುಷ್ಠಾನದ ಶ್ರದ್ಧೆನೂರ್ಮಡಿಗೊಂಡಿತು. ಸ್ವಾಮೀಜಿಯವರು ಪ್ರತಿಪಾದಿಸಿದ 'ಜೀವರಲ್ಲಿ ಶಿವನನ್ನು ಕಂಡು ಆರಾಧಿಸು' ಎಂಬ ತತ್ತ್ವಕ್ಕೆ ತಲೆಬಾಗಿ, ಕಾರ್ಯೋನ್ಮುಖರಾದ ರಾಜ ತನ್ನ ಸಾಮ್ರಾಜ್ಯದಲ್ಲಿ ದೀನದಲಿತರ, ಅಶಕ್ತ ಹಾಗೂ ಮಹಿಳೆಯರಿಗಾಗಿ ವಸತಿ ಶಾಲೆಗಳನ್ನು ತೆರೆದದ್ದು ಸ್ವತಂತ್ರ್ಯಪೂರ್ವ ಭಾರತದಲ್ಲಿ ಕ್ರಾಂತಿಕಾರಿ ವಿಚಾರವೇ ಸರಿ. ಈ ಮೂಲಕ ಮೈಸೂರಿನ ಅರಸರು ವಿಶ್ವವಿಖ್ಯಾತರಾದರು.**

ಸಮಾಜದ ನಡುವೆ ವಿಕಸನಗೊಳ್ಳುವ ಪ್ರತಿಯೊಂದು ಜೀವಿಯೂ ಮೌಲ್ಯಗಳಲ್ಲಿ ಭರವಸೆ ತಳೆಯುವುದು ಮೌಲ್ಯವಂತರ ಜೀವನಶೈಲಿಯನ್ನು ಕಂಡು ಆಕರ್ಷಿತವಾದಾಗ, ಸ್ವಾಮಿ ವಿವೇಕಾನಂದರು ಹೇಳುತ್ತಾರೆ : 'ಎಲ್ಲಿ ಉದಾತ್ತ ಸತ್ಯಗಳು ಕಾರ್ಯೋಪಯೋಗಿ ಎನಿಸಿಕೊಳ್ಳುತ್ತವೆಯೋ ಅಂಥ ಸಮಾಜವು ಮಹಾನ್ ಸಮಾಜವಾಗಿರುತ್ತದೆ!... ಒಂದು ವೇಳೆ ಸಮಾಜವೊಂದು ಉದಾತ್ತ ಸತ್ಯಗಳ ಅಳವಡಿಕೆಗೆ ತಕ್ಕನಂತಿಲ್ಲದಿದ್ದರೆ, ಅದಕ್ಕೆ ಅಂಥ ಅರ್ಹತೆ-ಸಾಮರ್ಥ್ಯವನ್ನು ತಂದುಕೊಡಿ ಮತ್ತು ಸಾಧ್ಯವಾದಷ್ಟು ಬೇಗ ಅದನ್ನು ಉತ್ತಮವಾಗಿಸಿ.' ಮಾನವನ ಅಭ್ಯುದಯದಿಂದ ಸುಂದರವಾದ, ಸ್ವರ್ಗಸದೃಶವಾದ ಜಗತ್ತನ್ನು ನಿರ್ಮಿಸಬಹುದು.

ರಾಮಕೃಷ್ಣ ಮಿಷನ್ ಸ್ಥಾಪನೆಯಾದ ಒಂದು ಶತಮಾನದ ಈ ಅವಧಿಯಲ್ಲಿ ರಾಷ್ಟ್ರದ ಉದ್ದಗಲಕ್ಕೂ ಒಂದೂವರೆ ಸಾವಿರ ಸರ್ಕಾರೇತರ ಸೇವಾ ಸಂಸ್ಥೆಗಳು 'ಸೇವಾ ತತ್ತ್ವ'ದ ಘನತೆಗೆ ಚ್ಯುತಿಬಾರದಂತೆ ಕಾರ್ಯಶೀಲವಾಗಿ ಸಾಗಿವೆ.

ಬಾಲಗಂಗಾಧರ ತಿಲಕರು – 'ಸ್ವಾಮಿ ವಿವೇಕಾನಂದರು ಬಲಿಷ್ಠವೂ, ಪ್ರೌಢವೂ ಹಾಗೂ ಅತ್ಯುತ್ಕೃಷ್ಟವೂ ಆದ ಚಿಂತನೆಗಳ ಮೂಲಕ ಹಿಂದೂ ಧರ್ಮವನ್ನು ಜಗತ್ತಿನ ಮೂಲೆ-ಮೂಲೆಗೆ ಪಸರಿಸಿದರು. ಹನ್ನೆರಡು ಶತಮಾನಗಳ ಹಿಂದೆ ದೇಶವು ಸಂಕಷ್ಟದಲ್ಲಿದ್ದಾಗ ಆದಿ ಶಂಕರಾಚಾರ್ಯರು ದೇಶ ಪರಿಕ್ರಮಗೈದು ಧರ್ಮವು ನಮ್ಮ ಉದ್ಧಾರವನ್ನು ದೊರಕಿಸಿಕೊಡುವ ಶುದ್ಧ ವೈಚಾರಿಕ ಸಂಪನ್ಮೂಲ,

ಅದೇ ನಮ್ಮ ಜೀವಾಳ. ನಮ್ಮ ಉಳಿವಿಗೆ ಧರ್ಮ ಅನಿವಾರ್ಯ ಎಂಬುದನ್ನು ಸಾಬೀತುಪಡಿಸಿದ ರೀತಿಯಲ್ಲೇ ವಿವೇಕಾನಂದರು ಧರ್ಮ ಸಂಸ್ಥಾಪನೆಯ ಕಾರ್ಯ ಮಾಡಿದ್ದಾರೆ. ಭಾರತದ ಇತಿಹಾಸದಲ್ಲಿ ಸರ್ವ ರೀತಿಯಿಂದಲೂ ಸ್ವಾಮಿ ವಿವೇಕಾನಂದರನ್ನು ಶ್ರೀ ಆದಿ ಶಂಕರಾಚಾರ್ಯರೊಂದಿಗೆ ಹೋಲಿಕೆ ಮಾಡಬಹುದು' ಎಂದಿದ್ದಾರೆ.

**ಶ್ರೇಷ್ಠ ಮಾನವತಾವಾದಿ :** ಜಗತ್ತು ಕಂಡ ಶ್ರೇಷ್ಠ ಮಾನವತಾವಾದಿಗಳಲ್ಲಿ ಸ್ವಾಮಿ ವಿವೇಕಾನಂದರು ಅಗ್ರಮಾನ್ಯರೆನಿಸಿದ್ದಾರೆ. ಅವರು ತಮ್ಮ ಅತ್ಯುತ್ತಮ ಚಿಂತನೆಗಳ ಮೂಲಕ ಮನುಷ್ಯಲೋಕದ ಆಲೋಚನಾ ಲಹರಿಯನ್ನೇ ಸಕಾರಾತ್ಮಕವಾಗಿ ಬದಲಿಸಿದರೆಂದರೆ ಉತ್ಪ್ರೇಕ್ಷೆಯಲ್ಲ. ವಿಶ್ವಮಾನವರಾದ ವಿವೇಕಾನಂದರು ಭಾರತದ ಸಮಗ್ರ ಇತಿಹಾಸವನ್ನು ಅಮೂಲಾಗ್ರವಾಗಿ ಅಧ್ಯಯನಗೈದು ಈ ಪರಂಪರೆ ಹಾದು ಬಂದ ವಿವಿಧ ಹಂತಗಳನ್ನು ನಿಷ್ಪಕ್ಷಪಾತವಾಗಿ ವಿಶ್ಲೇಷಿಸಿದ್ದಾರೆ. ಭಾರತದ ಬಗ್ಗೆ ನಮಗೆ ಅವರಿತ್ತ ಅಭಿಪ್ರಾಯಗಳಲ್ಲಿ ವಾಸ್ತವವಿದೆ, ನೈಜತೆಯಿದೆ. ಅವುಗಳಲ್ಲಿ ಪೂರ್ವಗ್ರಹದ ಸೋಂಕಿಲ್ಲ, ದ್ವಂದ್ವ ನಿಲುವುಗಳಿಗೆ ಅವಕಾಶವಿಲ್ಲ.

ಸ್ವಾಮಿ ವಿವೇಕಾನಂದರ ಜೀವನ ಸಂದೇಶಗಳನ್ನು ಅಧ್ಯಯನ ಮಾಡುವುದರಿಂದ ನಾವು ಸರ್ವ ರೀತಿಯ ದಾರಿದ್ರ್ಯಗಳಿಂದ ಮುಕ್ತರಾಗಲು ಸಾಧ್ಯ. ಇಂದಿನ ಸಮಾಜದಲ್ಲಿನ ಸಮಸ್ಯೆಗಳಿಗೆ ದುಷ್ಟಜನರ ಐಕಮತ್ಯ ಮತ್ತು ಕಾರ್ಯಪ್ರಕ್ರಿಯೆಗಳಿಗಿಂತ ಸಜ್ಜನರ ನಿಷ್ಕ್ರಿಯತೆಯೇ ಪ್ರಧಾನ ಕಾರಣ ಎಂದಿದ್ದಾರೆ ವಿವೇಕಾನಂದರು. ಶೀಲವಂತರು ಹಾಗೂ ವಿವೇಕಿಗಳು ಮಾತ್ರವೇ ರಾಷ್ಟ್ರವನ್ನು ಸದೃಢವಾಗಿ ನಿರ್ಮಿಸಬಲ್ಲರು.

ಬಡವ-ಶ್ರೀಮಂತರೆನ್ನದೆ, ವಿದ್ಯಾವಂತ-ಅವಿದ್ಯಾವಂತರೆಂಬ ತರತಮ ಭಾವನೆಗೆ ಎಡೆಮಾಡದೆ, ಪೂರ್ವ-ಪಶ್ಚಿಮ ದಿಕ್ಕುಗಳನ್ನು ವೈರುಧ್ಯದ ಅಂಗಗಳಾಗಿಸದೆ 'East is East; West is West; they will never meet' ಎಂಬ ಪಾಶ್ಚಾತ್ಯರಲ್ಲಿ ಬಲವಾಗಿ ಬೇರೂರಿದ್ದ ಸಂಕುಚಿತವೂ ದ್ವಂದ್ವವೂ ಆದ ನಿಲುವನ್ನು ತಮ್ಮ ಬುದ್ಧಿ-ಭಾವಗಳಿಂದ ನಿಶ್ಶೇಷಗೊಳಿಸಿದವರು ಸ್ವಾಮಿ ವಿವೇಕಾನಂದರು.

(ಕೃಪೆ : ವಿಜಯವಾಣಿ)

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು **ಸಿದ್ಧಗಂಗಾ ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಡಿ) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿಕೊಳ್ಳಬೇಕೆಂದು ಕೋರುತ್ತೇವೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೩೨೨



ನುಡಿನಮನ

# ನಡೆದಾಡುವ ದೇವರು

– ಶ್ರೀ ಶ್ರೀ ಮಹಂತ ಮಹಾಸ್ವಾಮಿಗಳು *

ದಾಸೋಹಮೂರ್ತಿಗಳಾಗಿರತಕ್ಕಂಥ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಲ್ಲಿ ಶಿವಾನುಭವವನ್ನು ಕಂಡು, ನೋಡಿ, ಅದನ್ನು ಅನುಭವಿಸ ಬೇಕಾಗಿದೆ. ಅದು ಜಂಗಮಲಿಂಗ, ಪೂಜ್ಯರಾಗಿರತಕ್ಕಂತಹ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ನಾವು ನೋಡಿದರೆ ಸಾಕು, ಅವರ ಕ್ರಿಯಾಶೀಲತೆಯನ್ನು ಕಂಡು ನಾವು ಸಂತೋಷಪಟ್ಟರೆ ಸಾಕು. ನಮಗೆ ಶಿವಾನುಭವದ ಅರಿವು ಆಗುತ್ತದೆ. ೧೨ನೇ ಶತಮಾನದಲ್ಲಿ ಇಡೀ ವಿಶ್ವಕ್ಕೆ ಬಸವಣ್ಣನವರು ಕೊಟ್ಟಿದ್ದರೆ ಅದು ಕಾಯಕ, ದಾಸೋಹ, ಪ್ರಸಾದ. ಈ ಮೂರು ಮುಪ್ಪುರಿಗೊಂಡು ಪೂಜ್ಯರಾಗಿರತಕ್ಕಂತಹ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರಲ್ಲಿ ಅವರು ಮಾಡಿರತಕ್ಕಂತಹ ಈ ಬೃಹತ್ ಕಾರ್ಯವನ್ನು ನೋಡಿದರೆ ನಿಜವಾಗಿಯೂ ಬಹಳ ಸಂತೋಷವಾಗುತ್ತದೆ. ಈ ಜಂಗಮಲಿಂಗ ಕ್ಷೇತ್ರವಾಗಿರತಕ್ಕಂತಹ ಈ ಸಿದ್ಧಗಂಗೆಗೆ ಜಂಗಮ ಚೈತನ್ಯ ಲಿಂಗವಾಗಿದೆ. ತ್ರಿವಿಧ ದಾಸೋಹ ಮೂರ್ತಿಗಳು, ಬಸವಾದಿ ಪ್ರಮಥರು, ಮಹಾಸಂದೇಶಕ್ಕೆ ಪೂಜ್ಯರು ಪ್ರತ್ಯಕ್ಷ ಪ್ರಯೋಗ ಶಾಲೆಯಾಗಿದ್ದಾರೆ.

ನುಡಿಲಿಂಗವಾಗಿ ನಡೆಲಿಂಗವಾಗಿ ಈ ವಿಶ್ವವನ್ನು ಮುನ್ನಡೆಸುವಂತಹದ್ದರಲ್ಲಿ ಕರ್ತಾರನ ಕಮ್ಮಟವಾದರೂ ಪೂಜ್ಯರಾಗಿರತಕ್ಕಂತಹ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು. ನಮಗೆ ಕಾಶಿಯಾಗಲಿ, ಶ್ರೀಶೈಲವಾಗಲಿ ನಮ್ಮ ಪುಣ್ಯಕ್ಷೇತ್ರವಲ್ಲ. ಪರಮಪೂಜ್ಯರಾಗಿರತಕ್ಕಂತಹ ಶ್ರೀ ಶ್ರೀ ಶಿವಕುಮಾರ ಮಹಾಶಿವಯೋಗಿಗಳವರ ಸುಜ್ಞಾನ ಶ್ರೀಪಾದವೇ ಸುಕ್ಷೇತ್ರ. ಶ್ರೀ ಸಿದ್ಧಗಂಗೆಯ ಪಾವನ ಯೋಗಗಂಗೆಯೇ ಗಂಗಾಸ್ನಾನ.

ಪೂಜ್ಯರಾಗಿರತಕ್ಕಂತಹ ಅಪ್ಪಗಳವರು ತಮ್ಮ ಅರುಹಿ ನೇತ್ರದಿಂದ ಅನುಭವದ ಎತ್ತರದಿಂದ ಚಲಿಸುತ್ತಿರುವ ದೇವಾಲಯವಾಗಿದ್ದಾರೆ. ದೇಹವೆ ದೇವಾಲಯವಾಗಿರುವಾಗ, ಸತ್ಯ ಜ್ಞಾನದ ಚೈತನ್ಯವೇ ಜಂಗಮ ಲಿಂಗವಾಗಿರುವಾಗ ಮತ್ತೆ ಬೇರೆ ಜಡಮೂರ್ತಿಗಳಿಗೆ ಹೋಗುವಂತದ್ದಾದರೂ ನಮಗೆ ಯಾಕೆ ಬೇಕು? ಯಾವ ಗುಡಿ-ಗುಂಡಾರಗಳಿಗೆ ಹೋಗುವಂತಹ ಅಗತ್ಯವಿಲ್ಲ. ಪೂಜ್ಯರಾಗಿರತಕ್ಕಂತಹ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಸನ್ನಿಧಿಗೆ ಬಂದು ಅವರ ಕೃಪಾಶೀರ್ವಾದಗಳನ್ನು ಪಡೆದುಕೊಂಡು ಹೋಗಿಬಿಟ್ಟರೆ ಸಾಕು. ಪೂಜ್ಯರು ಹೇಗಿದ್ದಾರೆ ಎಂದರೆ "ತನುವಿನಲ್ಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲ್ಲಿ ನಿರಪೇಕ್ಷೆ, ವಿಷಯದಲ್ಲಿ ಉದಾಸೀನ, ಭಾವದಲ್ಲಿ ದಿಗಂಬರ, ಜ್ಞಾನದಲ್ಲಿ

* ಶ್ರೀ ಚಿತ್ತರಗಿ ಮಹಾಸಂಸ್ಥಾನ ಮಠ, ಇಳಕಲ್







ನೆಲೆಗೊಂಡ ಬಳಿಕ ಸೌರಾಷ್ಟ್ರ ಸೋಮೇಶ್ವರ ಲಿಂಗವು ಬೇರಿಲ್ಲಾ ಕಾಣಿರೋ". ಇದು ಪೂಜ್ಯರ ಒಂದು ವ್ಯಕ್ತಿತ್ವದ ಚಿತ್ರವನ್ನು ಶರಣ ಅದಯ್ಯನವರು ಹಿಂದೆಯೇ ಸಾರಿಬಿಟ್ಟಿದ್ದಾರೆ. ಇಂತಹ ಪೂಜ್ಯ ಅಪ್ಪಗಳ ಅರಿವಿನಿಂದ ಒಪ್ಪಿತವಾಗಿರತಕ್ಕಂತಹ ಈ ದಿವ್ಯಚೇತನವನ್ನು ಪ್ರತ್ಯಕ್ಷ ಕಂಡರಲ್ಲವೇ ನಮಗೆ ಶಿವಾನುಭವದ ಅರಿವು ಆಗುವುದು. "ನಿಜವನ್ನು ಅರಿತ ನಿಶ್ಚಿಂತರು, ಮರಣವನ್ನು ಗೆಲಿದ ಮಹಾಂತರು, ಇವರು ಪರವನ್ನು ಒಳಗೊಂಡ ಪರಿಣಾಮಿಗಳು." ಇಂತಹ ಸಹಜ ಶಿವಯೋಗಿಗಳನ್ನು ಪಡೆದ ೨೦ನೇ ಶತಮಾನ ಅತ್ಯಂತ ಭಾಗ್ಯದ ಕಾಲ. ಇದೊಂದು ಮಹಾಪರ್ವ ಕಾಲ. ಇವರನ್ನು ಪ್ರತ್ಯಕ್ಷವಾಗಿ ಪಡೆದಂತಹ ನಾವು ಅತ್ಯಂತ ಭಾಗ್ಯವಂತರು. ಶಿವನಲ್ಲಿ ಅಖಂಡವಾದ ನಂಬಿಕೆ, ಜಂಗಮದಲ್ಲಿ ಅಖಂಡವಾದ ನಂಬಿಕೆಯನ್ನು ಇರಿಸಿ, ಸಕಲ ಜೀವಾತ್ಮಗಳಿಗೆ ಲೇಸನ್ನು ಬಯಸುವವನೇ ಶರಣ. ವ್ಯಕ್ತಿ ಪರಿವರ್ತನೆ ಹಾಗೂ ವಿಶ್ವಪರಿವರ್ತನೆಗಳು ಶರಣರ ಮಹಾಗುರಿಯಾಗಿದೆ.

ಎಲ್ಲ ಕಾಲಕ್ಕಿಂತಲೂ ಇಂದಿನ ಕಾಲದಲ್ಲಿ ಬಸವಾದಿ ಶರಣರ ವಚನಗಳ ಅಗತ್ಯತೆ ಬೇಕಾಗಿದೆ. ಧರ್ಮಭೇದ, ಜನಾಂಗ ಭೇದ ಹಾಗೂ ವರ್ಣಭೇದಗಳಿಂದ ಜಗತ್ತು ತತ್ತರಿಸಿ ಹೋಗುತ್ತಿದೆ. ಸಿಲೋನ್, ಪಂಜಾಬ್, ಕಾಶ್ಮೀರ್, ಡಾರ್ಜಿಲಿಂಗ್, ಆಸ್ಸಾಂಗಳಲ್ಲಿ ಪ್ರತಿನಿತ್ಯವೂ ಮುಗ್ಧ ಮಾನವರ ರಕ್ತಹರಿದು ಹೋಗುತ್ತಿದೆ. ದಕ್ಷಿಣ ಆಫ್ರಿಕಾ ಮತ್ತು ಜರ್ಮನಿಗಳು ಜಾಗತಿಕ ವರ್ಣಭೇದ, ಜನಾಂಗಭೇದದ ನೀತಿಗೆ ಬಲಿಪಶುಗಳಾಗಿವೆ. ಇಂದು ಪರಮಪಾವನ ಮೂರ್ತಿಗಳಾದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಂಥ ತೇಜೋವಂತರ ಯೋಗ ರಕ್ಷೆಯಲ್ಲಿ ದಕ್ಷಿಣ ಭಾರತ ಶಾಂತವಾಗಿದೆ. ನಮ್ಮಲ್ಲಿಯ ಒಳಗಿನ ಸಮಸ್ಯೆಗಳಾದ ಜಾತಿಯೊಳಗಿನ ಜಾತಿಗಳು, ಮಡಿ ಮೈಲಿಗೆಗಳು, ಶರಣರನ್ನು, ವಿಶ್ವಗುರು ಬಸವಣ್ಣನವರನ್ನು ಎಡಗಣ್ಣಿನಿಂದ ಕಾಣುವ ಜಾತಿ, ಧರ್ಮಗಳು, ಮಾನವರ ಹೆಗಲ ಮೇಲೆ ಮಾನವರು ಕುಳಿತು ಮೆರೆಯುವ ಅಡ್ಡಪಲ್ಲಕ್ಕಿಗಳು, ಮದುವೆಗಳಲ್ಲಿ ದುಂದುವೆಚ್ಚ, ವರದಕ್ಷಿಣೆ ಶೋಷಣೆ, ಉಚ್ಚ-ನೀಚ ಭಾವ, ದೇವದಾಸಿ ಪದ್ಧತಿ, ಕುಡಿತ, ಇಸ್ಪೀಟು, ತಂಬಾಕು, ಓ.ಸಿ. ಮುಂತಾದ ದುಶ್ಚಟಗಳ ವಿರುದ್ಧ ಪರಮಪೂಜ್ಯರಾಗಿರುವ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಲವು ದಶಕಗಳಿಂದ ಒಂದು ಯುದ್ಧವನ್ನೇ ಸಾರಿದಂತೆ ಕಾಣುತ್ತಿದೆ, ಸಾರಿದ್ದಾರೆ. ಇಂದಿನ ವಾಮಾಚಾರಗಳಿಗೆ ನಮ್ಮ ಮಕ್ಕಳು ಬಲಿಯಾಗಬಾರದೆಂದು ಪೂಜ್ಯರು ಪ್ರಸಾದ ನಿಲಯದ ಮಹಾನ್ ಆಶ್ರಯ ನೀಡಿ ಲಕ್ಷಾಂತರ ವಿದ್ಯಾರ್ಥಿಗಳಿಗೆ ಅನ್ನದಾಸೋಹ, ಜ್ಞಾನದಾಸೋಹ ನೀಡಿದ್ದಾರೆ. ಸಿದ್ಧಗಂಗೆ ಪ್ರಸಾದದಲ್ಲಿ ಪಾವನಗಂಗೆ ವಾಸ ಮಾಡಿದ್ದಾಳೆ. ಪ್ರಸಾದ ಪವಿತ್ರ ಜೀವನದ ಭದ್ರ ಅಡಿಗಲ್ಲು ಎಂದು ಶರಣರು ಅಖಂಡವಾಗಿ ನಂಬಿದ್ದಾರೆ, ನಂಬಿದ್ದರು. ಪ್ರಾಸಾದಿಕರು ಎಂದರೆ ಪವಿತ್ರ ಜೀವನಕ್ಕೆ ಪೂರಕವಾದ ಪವಿತ್ರ ಪ್ರಸಾದವನ್ನು ಶಿವನ ನೆನಪಿನಲ್ಲಿ ತೆಗೆದುಕೊಂಡರು ಎಂಬ ಅರ್ಥ. ಕಾಯಕವಿಲ್ಲದೆ ಪ್ರಸಾದವಿಲ್ಲ, ಪ್ರಸಾದವಿಲ್ಲದೆ ಲಿಂಗಾಂಗ ಸಾಮರಸ್ಯವಿಲ್ಲ. ಕಾಯಕ ಪ್ರಸಾದ ಲಿಂಗಾಂಗ ಸಾಮರಸ್ಯಗಳ ಗುಟ್ಟು. ಈ ಗುಟ್ಟಿನ ಫಲವನ್ನೇ ತ್ರಿವಿಧ ದಾಸೋಹಿ. ವೀರ ದಾಸೋಹಿ, ಮಹಾದಾಸೋಹಿ ಗಳೆನ್ನುತ್ತೇವೆ. ಈ ನಿಟ್ಟಿನಲ್ಲಿ ಪೂಜ್ಯರಾಗಿರುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅಗ್ರಗಣ್ಯರಾಗಿ ತಮ್ಮ ಬದುಕನ್ನು ಅತ್ಯಂತ ಪವಿತ್ರವನ್ನಾಗಿ ಮಾಡಿಕೊಂಡಿದ್ದಾರೆ. ನಮ್ಮೆದುರಿನಲ್ಲಿ ಪೂಜ್ಯ ಡಾ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ವೀರ ದಾಸೋಹಿಗಳು, ಮಹಾದಾಸೋಹಿಗಳಾಗಿದ್ದು ಇವರಿಂದ ವ್ಯಕ್ತಿ ಪರಿವರ್ತನೆ ಹಾಗೂ ವಿಶ್ವ ಪರಿವರ್ತನೆಗಳಿಂದ ಸಮಗ್ರ ಕಲ್ಯಾಣ ಸಾಧ್ಯ.

ಇಂದು ಅನುಭಾವದ ಆತ್ಮವಿದ್ಯೆ ದೂರಾಗುತ್ತಿದೆ. ಲೌಕಿಕ ಆಡಂಬರಗಳು ಅತಿಯಾಗುತ್ತಿವೆ, ಒಳಗನ್ನು ಬೆಳಗುವ ಬದಲು ಹೊರಗು ಬೆಳಗುವವರು ಇವೊತ್ತು ನಮ್ಮೆದುರಿಗೆ ಸಾಕಷ್ಟು ಸಂಖ್ಯೆಯಲ್ಲಿ ಕಾಣುತ್ತಿದ್ದಾರೆ. ಕೇವಲ ಬಾಹ್ಯಪೂಜೆ, ನಮ್ಮ ಜೀವನದ ಬದುಕಲ್ಲ, ಅದು ನಮ್ಮನ್ನು ನಿಜವಾಗಿಯೂ ದಾರಿ ತಪ್ಪಿಸಿಬಿಡುತ್ತಿದೆ. ಸದಾ ಕಾಯಕ, ಸದಾ ಸರಳಜೀವನ, ಸದಾ ಅವ್ಯಕ್ತ ಸೇವೆ, ನಿರಂತರ ದಾಸೋಹಗಳಿಂದ ಪೂಜ್ಯ ಶ್ರೀಗಳವರು ಕಣ್ಣೆದುರಿಗೆ ಕೈಲಾಸವಾಗಿ ಬೆಳಗುತ್ತಿದ್ದಾರೆ. ■







ಸಾಂದರ್ಭಿಕ

# ವಚನ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆ ನೀಡಿದ ರೆವರೆಂಡ್ ಉತ್ತಂಗಿ ಚೆನ್ನಪ್ಪ

– ಎಚ್.ಎಸ್. ಸಿದ್ಧಗಂಗಪ್ಪ *

**ಬಾಸೆಲ್** ಮಿಶನ್ನರಲ್ಲಿ ಕ್ಷೇತ್ರ ಉಪದೇಶಕರಾಗಿ ಸೇವೆ ಸಲ್ಲಿಸುತ್ತಿದ್ದರೂ. ಬಸವಣ್ಣನವರು ಹಾಗೂ ಶರಣರ ಪ್ರಭಾವದಿಂದ ವಚನ ಹಾಗೂ ವೀರಶೈವ ಸಾಹಿತ್ಯಕ್ಕೆ ಹಲವಾರು ಶ್ರೇಷ್ಠ ಕೃತಿಗಳನ್ನು ರಚಿಸುವುದರ ಮೂಲಕ ಅಮೂಲ್ಯ ಕೊಡುಗೆಯನ್ನು ನೀಡಿದವರು ರೆವರೆಂಡ್ ಚೆನ್ನಪ್ಪ ಉತ್ತಂಗಿ ಅವರು. ಸರಳತೆ, ಸಜ್ಜನಿಕೆಯನ್ನು ಮೈಗೂಡಿಸಿಕೊಂಡಿದ್ದ ಅವರು ಮೌಲಿಕ ಗ್ರಂಥಗಳನ್ನು ರಚಿಸಿದರೂ ನಾನೊಬ್ಬ ಸಾಹಿತಿ, ಬರಹಗಾರನೆಂಬ ಹಮ್ಮು ತೋರಲಿಲ್ಲ. ಅವರೇ ಒಂದು ಕಡೆ "ನಾನೊಬ್ಬ ತಿಳಿತಿಳಿವಿನ ತಿರುಕ. ತಿರುಳುಗನ್ನಡ ತಿರುಕ. ಕಾಡಿಬೇಡುವನಲ್ಲ, ಬೇಡಿ ಬಂದವನಲ್ಲ ನೋಡಿ ಬಿಟ್ಟವನಲ್ಲ, ಮಹಾಕವಿಗಳು ಒಗೆದು ಬಿಟ್ಟಿದ್ದ ಎಂಜಲವನ್ನು ಪ್ರಸಾದವೆಂದತ್ತಿ ತಂದು, ಕನ್ನಡಕ್ಕಾಗಿ ಹಸಿದ ಮಕ್ಕಳೆಲ್ಲರನ್ನು ಕರೆದುಕೊಂಡುಂಡ ತಿರುಕ. ಹೊರಗನ್ನು ನೋಡಿ ಒಳಗನ್ನರಿಯದವರ ಒಳಗನ್ನರಿಯಬೇಕೆಂದು ತಿರುಗಾಡಿದ ತಿರುಕ. ನಾನು ಕವಿಯಲ್ಲ, ಕವನಗಾರನಲ್ಲ, ಕತೆಗಾರನಲ್ಲ, ಆದರೂ ನಾನೊಂದು ಹಾಡು ಹಾಡುವೆ, ಪ್ರಾಸವಿಲ್ಲದ ಹಾಡು, ಮಾನವ ಹಾಡು, ಅವನ್ನು ನೆನೆದಾಗಲೆಲ್ಲ ಉದುರುವ ಕಂಬನಿಗಳೇ ಅದರ ನುಡಿಗಳು. ನನ್ನ ಹಾಡನ್ನು ಬರೆದು ಪ್ರಕಾಶಿಸಬೇಕೆಂಬ ಹಂಬಲ ನನ್ನಲ್ಲಿರಲಿಲ್ಲ. ಆದರೂ ಬರೆದೆ, ಮುಂದಿನ ಪೀಳಿಗೆಯ ಏಳಿಗೆಗಾಗಿ, ಸುಖ ಜೀವಿಗಳಾದ ಸಾಹಿತಿಗಳಿಗಾಗಿ ಅಲ್ಲ; ಕಷ್ಟ ಜೀವನದ ಕನ್ನಡ ಸಾಹಿತಿಗಳಿಗಾಗಿ, ಲಕ್ಷ್ಮಿಯು ಬಿಟ್ಟು ಹೋದ ಮನೆಯಲ್ಲಿ ಹುಟ್ಟಿದ ಸರಸ್ವತಿಯ ಪುತ್ರರಿಗಾಗಿ, ಬಡತನದ ಗೋಳಿನಲ್ಲಿ ಬಾಳುವವರಿಗಾಗಿ, ಸಾಹಿತ್ಯ ಸೇವೆಯಲ್ಲಿ ಕಾರಣಾಂತರಗಳಿಂದ ಕಂಗೆಟ್ಟ ಕನ್ನಡಿಗರಿಗಾಗಿ." ಅವರ ಒಂದೊಂದು ನುಡಿಗಳೂ, ಯುವ ಸಾಹಿತಿಗಳಿಗೆ ದಾರಿದೀಪವಾಗಿದೆ. ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರ 'ಹಣತೆ' ಕವನದ ನೆನಪಾಗುತ್ತದೆ.

**ಜನನ-ಶಿಕ್ಷಣ :** ಅಕ್ಟೋಬರ್ ೨೮, ೧೮೮೧ ರಂದು ಜನನ. ತಂದೆ ದಾನಿಯೇಲಪ್ಪ, ತಾಯಿ ಶ್ರೀಮತಿ ಸುಭದ್ರಮ್ಮ. ಹುಟ್ಟಿದ ಊರು ಬಳ್ಳಾರಿ ಜಿಲ್ಲೆ, ಹೂವಿನಹಡಗಲಿ ತಾಲ್ಲೂಕು, ಉತ್ತಂಗಿ ಗ್ರಾಮ. ಪ್ರೀತಿಯಿಂದ ಇಟ್ಟ ಹೆಸರು ಚೆನ್ನಪ್ಪ. ಅವರು ತಾತ ಚೆನ್ನಪ್ಪಗೌಡರ ಹೆಸರನ್ನೆ ಇಟ್ಟರು.

ಶ್ರೀ ಚೆನ್ನಪ್ಪಗೌಡರು ಉತ್ತಂಗಿ ಗ್ರಾಮದ ಪಾರುಪತ್ಯಗಾರರು, ಪಟೇಲರು ಆಗಿದ್ದರು. ಅಧಿಕಾರ, ಸಂಪತ್ತು ಎಲ್ಲವೂ ಇದ್ದು ಆ ಭಾಗದ ಪ್ರತಿಷ್ಠಿತ ವ್ಯಕ್ತಿಯಾಗಿದ್ದರು. ಗಂಡು ಮಗುವಾಗಲಿಲ್ಲವೆಂಬ ಕೊರಗು. ಆ ಕೊರಗಿನಲ್ಲಿಯೇ ಹೆಂಡತಿಯ ಆತ್ಮಹತ್ಯೆ, ಚೆನ್ನಪ್ಪಗೌಡರ ಜೀವನದಲ್ಲಿ ಅಶಾಂತಿಯ ಬಿರುಗಾಳಿ ಬೀಸಿ, ಮನೆಯನ್ನು ತೊರೆದು ಬೇರೊಂದು ಊರಿಗೆ ಹೋಗಿ ಜೀವನ ನಿರ್ವಹಣೆಗಾಗಿ ಆ ಊರಿನ ಗೌಡರ ಮನೆಯಲ್ಲಿ ಜೀತದಾಳಾಗಿ ಸೇರಿಕೊಂಡರು. ಒಮ್ಮೆ ಆ ಊರಿನಲ್ಲಿ ಶ್ರಾವಣ ಮಾಸದ ನಿಮಿತ್ತ ಬಸವ ಪುರಾಣದ ಪ್ರವಚನ ನಡೆಯುತ್ತಿತ್ತು. ಚೆನ್ನಪ್ಪಗೌಡರು ಪ್ರವಚನ ಕೇಳಲು ಅಲ್ಲಿಗೆ ಹೋಗುತ್ತಿದ್ದರು. ಒಂದು ದಿನ ಪ್ರವಚನಕಾರರು ಬಸವ ಪುರಾಣದಲ್ಲಿಯ ಒಂದು ಘಟನೆಯನ್ನು ತಪ್ಪು ತಪ್ಪಾಗಿ ಹೇಳುತ್ತಿರುವಾಗ ಮನಸ್ಸು ತಡೆಯಲಾಗದೆ ಪ್ರತಿರೋಧ ವ್ಯಕ್ತಪಡಿಸಿದುದ್ದನ್ನು ಕೇಳಿದ ಆ ಊರಿನ ಗೌಡರಿಗೆ ತಮ್ಮ ಮನೆಯ ಆಳು ಹೀಗೆ ಹೇಳಿದುದು ಆಶ್ಚರ್ಯವೆನಿಸಿತು. ಬಸವ ಪುರಾಣವನ್ನು

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ಲನೇ ಬ್ಲಾಕ್,
ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧







ಅರ್ಥಮಾಡಿಕೊಂಡಿರುವ ಈತ ಸಾಮಾನ್ಯನಲ್ಲ ಎಂದು ಭಾವಿಸಿ ವಿಚಾರಿಸಿದಾಗ ಆಳು ಉತ್ತಂಗಿ ಗ್ರಾಮದ ಗೌಡರು ಎಂದು ತಿಳಿದು, ಆಳಾಗಿ ಇಟ್ಟುಕೊಂಡಿದ್ದಕ್ಕೆ ಪಶ್ಚಾತ್ತಾಪಪಟ್ಟು ಗೌರವದಿಂದ ಸತ್ಕರಿಸಿ, ಮನವೊಲಿಸಿ ಉತ್ತಂಗಿ ಗ್ರಾಮಕ್ಕೆ ಕರೆತಂದು ಬಿಟ್ಟರು. ಆದರೂ ಚೆನ್ನಪ್ಪಗೌಡರು ಮನಸ್ಸು ಅಶಾಂತಿಯ ಕಕ್ಷೆಯಿಂದ ಹೊರಬರಲಾಗದೆ ತೊಳಲಾಡುತ್ತಿದ್ದಾಗ, ಮಿಷನರಿಯೊಬ್ಬರ ಸಂಪರ್ಕದಿಂದ ಮನಪರಿವರ್ತನೆಯಾಗಿ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಿದರು. ನಂತರ ಅವರ ಮೊದಲ ಪತ್ನಿಗೆ ಗಂಡು ಮಗುವಾಯಿತು. ಆ ಮಗುವಿಗೆ ದಾನಿಯೇಲಪ್ಪ ಎಂದು ನಾಮಕರಣ ಮಾಡಿದರು. ಇವರ ಮಗನೇ ರೆವೆರೆಂಡ್ ಉತ್ತಂಗಿ ಚೆನ್ನಪ್ಪ.

ಬಾಲಕ ಚೆನ್ನಪ್ಪನನ್ನು ಶಾಲೆಗೆ ಸೇರಿಸಿದರು. ಹೇಳಿಕೊಟ್ಟಿದ್ದನ್ನು ಗ್ರಹಿಸಲಾಗದಷ್ಟು ಮಂದಬುದ್ಧಿ. ತರಗತಿಯಲ್ಲಿ ಕೊನೆಯವ. ಇದರಿಂದ ಅನೇಕ ಬಾರಿ ತಂದೆಯಿಂದ ಬೆತ್ತದ ರುಚಿ ನೋಡಬೇಕಾಯಿತು. ಮಗನ ಸ್ಥಿತಿಯನ್ನು ಕಂಡು ತಾಯಿ ಮರಗುತ್ತಿದ್ದರು. ಮಗನಿಗೆ ಒಳ್ಳೆಯ ಬುದ್ಧಿ ಕೊಟ್ಟು ಎಲ್ಲ ಮಕ್ಕಳಂತೆ ತನ್ನ ಮಗನನ್ನು ಮಾಡು ಎಂದು ದೇವರಲ್ಲಿ ಬೇಡಿಕೊಳ್ಳುತ್ತಿದ್ದರು. ದೇವರನ್ನು ಭಕ್ತಿಯಿಂದ ಪ್ರಾರ್ಥಿಸಿದರೆ, ಒಳ್ಳೆಯ ಬುದ್ಧಿಯನ್ನು ಕೊಡುತ್ತಾನೆ ಎಂದು ಹೇಳುತ್ತಿದ್ದರು. ತಾಯಿಯ ಮಾತು ವೇದವಾಕ್ಯವೆಂದು ಭಾವಿಸಿ ದೇವರಲ್ಲಿ ಭಕ್ತಿಯಿಂದ ಪ್ರಾರ್ಥಿಸುತ್ತಿದ್ದ. ಅವನ ಹಾಗೂ ಅವನ ತಾಯಿಯ ಪ್ರಾರ್ಥನೆ ಹುಸಿಯಾಗಲಿಲ್ಲ. ಚೆನ್ನಪ್ಪನಲ್ಲಿ ಜ್ಞಾನಜ್ಯೋತಿ ಬೆಳಗತೊಡಗಿತು. ಒಣಗಿದ ಮರದ ಬುಡ ಮತ್ತೆ ಚಿಗುರಲಾರಂಭಿಸಿತು. ಹಾಗೆ ಪಲ್ಲವಿಸುವುದನ್ನು ಕಂಡು ತಾಯಿಗೆ ಸಂತೋಷವಾಯಿತು. ಧನ್ಯತೆಯ ಭಾವನೆ ಮೂಡಿತು.

ಅದೇ ವೇಳೆಗೆ ಧಾರವಾಡದಲ್ಲಿ ಕ್ರೈಸ್ತ ವಿದ್ಯಾರ್ಥಿಗಳಿಗಾಗಿ ಮಿಶನರಿಗಳು ವಸತಿ ಶಾಲೆಯೊಂದನ್ನು ಪ್ರಾರಂಭಿಸಿದರು. ಅಲ್ಲಿ ೧೨ ಜನ ವಿದ್ಯಾರ್ಥಿಗಳಿಗೆ ಮಾತ್ರ ಅವಕಾಶ ಕಲ್ಪಿಸಲಾಯಿತು. ಅವರಲ್ಲಿ ಚೆನ್ನಪ್ಪನೂ ಒಬ್ಬನು. ಬಹುಬೇಗ ಇಂಗ್ಲೀಷ್ ಮತ್ತು ಸಂಸ್ಕೃತವನ್ನು ಕಲಿತನು. ಅವನ ಚಿಕಿತ್ಸಿಕ ಬುದ್ಧಿಯನ್ನು ಗಮನಿಸಿದ ವಿದ್ವಾಂಸರಾದ ರೆವರೆಂಡ್ ರಿಷ್‌ರ ಪ್ರಯತ್ನದಿಂದ ಧಾರವಾಡದ ಬಾಸೆಲ್ ಮಿಶನ್ ಹೈಸ್ಕೂಲಿನಲ್ಲಿ ನೇರವಾಗಿ ನಾಲ್ಕನೆಯ ವರ್ಗಕ್ಕೆ ಪ್ರವೇಶ ದೊರೆಯುವಂತಾಯಿತು.

ತರಗತಿಯಲ್ಲಿ ಚೆನ್ನಪ್ಪ ಕೇಳುತ್ತಿದ್ದ ಗಹನವಾದ ಪ್ರಶ್ನೆಗಳಿಗೆ ಉತ್ತರಿಸಲು ಅಧ್ಯಾಪಕರು ತಡಬಡಿಸುತ್ತಿದ್ದುದು, ಅಲ್ಲದೆ ಅವನ ಬುದ್ಧಿವಂತಿಕೆಯನ್ನು ಕಂಡು ಆಶ್ಚರ್ಯಪಡುತ್ತಿದ್ದರು. ಕೆಲವು ಸಲ ಕೇಳಿದ ಪ್ರಶ್ನೆಗಳಿಗೆ ಉತ್ತರ ಹೇಳಲಾಗದ ಅಸಹಾಯಕ ಸ್ಥಿತಿಯಿಂದ ಸಿಟ್ಟು ಮಾಡಿಕೊಳ್ಳುತ್ತಿದ್ದರು. ಶಿಕ್ಷಕರೊಂದಿಗೆ ವಾಗ್ವಾದಕ್ಕಿಳಿಯುವುದರಿಂದ ಯಾವ ಪ್ರಯೋಜನವೂ ಇಲ್ಲ ಎಂದು ಭಾವಿಸಿ ಮೌನವಹಿಸಿದರು. ಮೆಟ್ರಿಕ್ ಪರೀಕ್ಷೆಯಲ್ಲಿ ಅನುತ್ತೀರ್ಣರಾದರು. ಇದರಿಂದ ತಂದೆಗೆ ಆಘಾತವಾಯಿತು. ನನ್ನ ಮಗ ಚೆನ್ನಾಗಿ ಓದಿ ಸರ್ಕಾರದಲ್ಲಿ ಒಳ್ಳೆಯ ಹುದ್ದೆ ಪಡೆಯಲಿ ಎಂಬ ಬಯಕೆ ಈಡೇರದಿದ್ದುದಕ್ಕೆ ಮಗನ ಮೇಲೆ ಬೇಸರಪಟ್ಟುಕೊಂಡರು. ತಾಯಿಯ ಒತ್ತಾಸೆಯಂತೆ ಕ್ರೈಸ್ತ ಧರ್ಮದ ಅಧ್ಯಯನಕ್ಕಾಗಿ ಮಂಗಳೂರು ದೈವಜ್ಞಾನ ಶಾಲೆಗೆ ಪ್ರವೇಶ ಪಡೆದರು.

ಶಾಲೆಯಲ್ಲಿರುವ ಶಿಕ್ಷಣ ಪದ್ಧತಿಯನ್ನೇ ಬದಲಾಯಿಸಬೇಕೆಂದು ಮಿಶನರಿಗಳೊಂದಿಗೆ ವಾದಿಸಿದರು. ಇದರಿಂದ ಶಿಕ್ಷಕರೊಂದಿಗೆ ಮನಸ್ತಾಪ ಉಂಟಾಯಿತೆ ವಿನಹ ಯಾವ ಪ್ರಯೋಜನವೂ ಆಗಲಿಲ್ಲ. "ಗುರುಗಳೊಡನೆ ವಿನಾಕಾರಣ ಮನಸ್ತಾಪಕ್ಕೊಳಗಾಗುವುದಕ್ಕಿಂತ ನಿರ್ಜೀವ ಗ್ರಂಥಗಳೊಡನೆ ವಾಗ್ವಾದ ನಡೆಸುವುದು ಉತ್ತಮ ಉಪಾಯವೆಂದು ಭಾವಿಸಿ ಗುರುಗಳನ್ನು ಬಿಟ್ಟು ಗ್ರಂಥಗಳಿಗೆ ಗಂಟು ಬಿದ್ದೆ" ಎಂದು ಒಂದು ಕಡೆ ಹೇಳಿಕೊಂಡಿದ್ದಾರೆ.

ಅಲ್ಲಿಂದ ಅಧ್ಯಯನ ಅವರ ಜೀವನದ ಅವಿಭಾಜ್ಯ ಅಂಗವಾಯಿತು. ಜಗತ್ ಪ್ರಸಿದ್ಧ ವಿದ್ವಾಂಸರು, ಧಾರ್ಮಿಕ ಪುರುಷರು, ತತ್ತ್ವಜ್ಞಾನಿಗಳ, ಅನುಭಾವಿಗಳ ಗ್ರಂಥಗಳನ್ನು ತಲಸ್ಪರ್ಶಿ ಅಧ್ಯಯನ ಮಾಡಿ ಅವುಗಳಲ್ಲಿನ ವಿಷಯವನ್ನು ಕರಗತ ಮಾಡಿಕೊಂಡು ತಮ್ಮದೇ ಆದ ರೀತಿಯಲ್ಲಿ ಬರೆಯತೊಡಗಿದರು. ಶಿಕ್ಷಣವನ್ನು ೧೯೦೮ ರಲ್ಲಿ ಮುಗಿಸಿ, ಬಾಸೆಲ್ ಮಿಶನರಿಯಲ್ಲಿಯೇ ಉಪದೇಶಕರಾಗಿ ಸೇವೆಯಲ್ಲಿ ತೊಡಗಿಸಿಕೊಂಡರು.







**ಸಾಹಿತ್ಯ ಕ್ಷೇತ್ರ :** ಕ್ರೈಸ್ತ ಧರ್ಮದ ಪ್ರಚಾರಕರಾಗಿದ್ದರೂ ಆ ಧರ್ಮದ ಬಗ್ಗೆ ದುರಾಭಿಮಾನ ವಿರಲಿಲ್ಲ. ಸತ್ಯ, ನೀತಿ, ಸಮಾಜದ ಉನ್ನತಿಗೆ, ವ್ಯಕ್ತಿಯ ಬೌದ್ಧಿಕ ಬೆಳವಣಿಗೆಗೆ ಪೂರಕವಾದ ವಿಚಾರಗಳು ಯಾವುದೇ ಧರ್ಮದಲ್ಲಿದ್ದರೂ ಸ್ವಾಗತಿಸಿ, ಆ ಬಗ್ಗೆ ಕುರಿತು ಹೇಳುವ ಧೈರ್ಯವಂತರಾಗಿದ್ದರು. ಯಾವುದೇ ಕಾರಣಕ್ಕೂ ರಾಜಿಯಾಗದೆ, ಸತ್ಯವನ್ನು ಎತ್ತಿಹಿಡಿಯುವ ಅವರ ಗುಣ ಧರ್ಮದ ಬಗ್ಗೆ ಅಂಧ ಶ್ರದ್ಧೆಯನ್ನಿಟ್ಟುಕೊಂಡವರಿಗೆ ದಾರಿದೀಪವಾಗಿತ್ತು.

ಬಸವಣ್ಣನವರು ರೆವರೆಂಡ್ ಚನ್ನಪ್ಪನವರ ಮೇಲೆ ಪ್ರಭಾವ ಬೀರಿದ ಮಹಾ ವ್ಯಕ್ತಿಯಾಗಿದ್ದರು. ಬಸವಣ್ಣನವರು ಚಿಂತನೆಗಳಿಗೆ, ಮುಕ್ತ ಅಭಿಪ್ರಾಯವನ್ನು ವ್ಯಕ್ತಪಡಿಸಲು ರೂಪಿತವಾದ ಅನುಭವ ಮಂಟಪದಲ್ಲಿ ಸಕ್ರಿಯವಾಗಿ ಭಾಗವಹಿಸಿದ ಶಿವಶರಣರನ್ನು ಪೂಜ್ಯ ಭಾವದಿಂದ ಅವರು ತೋರಿದ ಮೌಲ್ಯಗಳನ್ನು ಕುರಿತು ತಮ್ಮ ಭಾಷಣದಲ್ಲಿ ಹೇಳುವುದನ್ನು ಕಂಡು ಕೆಲವರು, ಕ್ರೈಸ್ತ ಧರ್ಮವನ್ನು ಬಿಟ್ಟು ಬಸವಣ್ಣನವರ ವ್ಯಕ್ತಿತ್ವವನ್ನು, ಸಾಧನೆಯನ್ನು ಪ್ರಚಾರ ಮಾಡುತ್ತಿರುವುದರಿಂದ ಲಿಂಗಾಯತ ಮತಕ್ಕೆ ಸೇರುತ್ತಾನೆಂದು ಅಪಪ್ರಚಾರ ಮಾಡಿದರು. ಈ ಬಗ್ಗೆ ಮಿಶನರಿಯವರಿಗೆ ದೂರ ನೀಡಿ ಕೆಲಸದಿಂದ ತೆಗೆದು ಹಾಕಬೇಕೆಂದು ಒತ್ತಾಯ ಮಾಡಿದುದರಿಂದ ಕ್ರೈಸ್ತ ಧರ್ಮದ ಮಿಶನರಿಯವರು 'ನಿಮ್ಮನ್ನು ಸೇವೆಯಿಂದ ಏಕೆ ತೆಗೆದು ಹಾಕಬಾರದು ?' ಎಂದು ನೋಟಿಸ್ ಕೊಟ್ಟರು. ಕ್ರಾಂತಿಕಾರಿ ಮನೋಭಾವದವರಾದ ಉತ್ತಂಗಿ ಚೆನ್ನಪ್ಪನವರು ಅವರು ನೀಡಿದ ಎಚ್ಚರಿಕೆಯ ಪತ್ರಕ್ಕೆ ಸೊಪ್ಪು ಹಾಕದೆ 'ಪೂಜ್ಯ ಅಧ್ಯಕ್ಷರೇ, ತಾವು ನನ್ನ ಮೇಲಿನ ಅಧಿಕಾರಿಗಳಾಗಿರುವುದೇನೋ ನಿಜ. ಆದರೆ ನನ್ನಂತೆ ತಾವೂ ಬಾಸೆಲ್ ಮಿಶನ್ನಿನ ಸೇವಕರಲ್ಲೊಬ್ಬರೆಂಬುದನ್ನು ನೀವೆಂದಿಗೂ ಮರೆಯಲಾಗದು. ಕ್ರಿಸ್ತನಲ್ಲಿರುವ ಸತ್ಯವನ್ನು ಸಾರಿ ತಿಳಿಸುವುದೇ ಉಭಯತರ ಕರ್ತವ್ಯವಾಗಿದೆ. ಇದನ್ನು ಸಾಕಾರಗೊಳಿಸುವುದರಲ್ಲಿ ವಿದೇಶಿಯರಾದ ತಮಗೆಷ್ಟು ಉಪದೇಶ ಸ್ವಾತಂತ್ರ್ಯವಿದೆಯೋ, ಅದಕ್ಕೂ ಹೆಚ್ಚಿನ ಸ್ವಾತಂತ್ರ್ಯವು ಈ ದೇಶದವನಾದ ನನಗಿದೆಯೆಂದು ಕಂಠೋಕ್ತವಾಗಿ ಅರಿಕೆ ಮಾಡಿಕೊಳ್ಳುತ್ತೇನೆ. ನಮ್ಮಿಬ್ಬರ ಉಪದೇಶ, ವಿಧಾನದಲ್ಲಿ ವ್ಯತ್ಯಾಸವಿರಬಹುದು. ಆದರೆ ಹೀಗೆ ಮಾಡದೆ ಗತ್ಯಂತರವಿಲ್ಲ. ನಾನು ಈ ಕಾರ್ಯವನ್ನು ಮುಚ್ಚುಮರೆಯಲ್ಲಿ ಮಾಡದೆ ಪ್ರಕಟವಾಗಿ ಮಾಡಿದ್ದೇನೆ. ನನ್ನ ವಿಚಾರ ಧೋರಣೆ ತಮಗೆ ಇನ್ನು ಚೆನ್ನಾಗಿ ತಿಳಿಯಬೇಕಾದರೆ ನಾನು ಬರೆದ 'ಬನಾರಸಕ್ಕೆ ಬೆತ್ಲೆಹೋಮಿನ ವಿನಂತಿ' ಎಂಬ ಚಿಕ್ಕ ಪುಸ್ತಕವನ್ನು ದಯವಿಟ್ಟು ಓದಿಕೊಳ್ಳಬಹುದು."

ಉತ್ತಂಗಿ ಚೆನ್ನಪ್ಪನವರು ಸಮರ್ಥನೀಯವಾದ ಉತ್ತರದಿಂದ ಮಿಶನರಿಗಳು ನಿರುತ್ತರರಾದರು. ಬಸವಣ್ಣನವರ ವ್ಯಕ್ತಿತ್ವ ಹಾಗೂ ಸಮಾಜಮುಖಿ ಸೇವೆಯನ್ನು ಸಮಗ್ರವಾಗಿ ಅಧ್ಯಯನ ಮಾಡಿದ ಉತ್ತಂಗಿಯವರು ತಮ್ಮ ಅಪೂರ್ವ ಚಿಂತನೆಗಳೊಂದಿಗೆ, ಬಸವ ತತ್ತ್ವಗಳನ್ನು ಪ್ರಚುರಪಡಿಸುವಂತಹ ಗ್ರಂಥಗಳನ್ನು ರಚಿಸಿ ಲೋಕಾರ್ಪಣೆ ಮಾಡಿದರು.

**ರೆವರೆಂಡ್ ಉತ್ತಂಗಿ ಚೆನ್ನಪ್ಪನವರು ಬರೆದ ಕೃತಿಗಳು ಹೀಗಿವೆ :**

೧. ಸರ್ವಜ್ಞನ ವಚನಗಳು (೧೯೨೪)
೨. ಬಸವೇಶ್ವರನು ಕರ್ನಾಟಕ ಅಭ್ಯುದಯವೂ (೧೯೨೮)
೩. ಬಸವೇಶ್ವರನು ಅಸ್ಪೃಶ್ಯರ ಉದ್ಧಾರವು (೧೯೩೩)
೪. ಅನುಭವ ಮಂಟಪದ ಐತಿಹಾಸಿಕತೆ (೧೯೫೧)
೫. ಸಿದ್ಧರಾಮ ಸಾಹಿತ್ಯ ಸಂಗ್ರಹ (೧೯೫೫)
೬. ಆದಯ್ಯನ ವಚನಗಳು (೧೯೫೭)
೭. ಲಿಂಗಾಯತ ಧರ್ಮ ಹಾಗೂ ಕ್ರೈಸ್ತ ಧರ್ಮ (೧೯೬೯)
೮. Anubhava Mantapa : The Heart of Virasaivaism (೧೯೩೨)
೯. ಆತ್ಮಚರಿತ್ರೆ
೧೦. ಮೃತ್ಯುಂಜಯ
೧೧. ದೃಷ್ಟಾಂತ ದರ್ಪಣ ಭಾಗ-೧ & ೨
೧೨. ನಾರಾಯಣನ ವಾಮನ ತಿಲಕ – ಜೀವನ ಚರಿತ್ರೆ
೧೩. ಹಿಂದೂ ಸಮಾಜ ಹಿತಚಿಂತಕ

**ಉತ್ತಂಗಿಯವರನ್ನು ಕುರಿತು ಪ್ರಕಟವಾದ ಗ್ರಂಥಗಳು**

೧. ಉತ್ತಂಗಿ ಚೆನ್ನಪ್ಪನವರು
೨. ಉತ್ತಂಗ ಸಾಹಿತಿ ಉತ್ತಂಗಿ ಚೆನ್ನಪ್ಪನವರು
೩. ಚೆನ್ನಪ್ಪ ಉತ್ತಂಗಿಯವರ ಬರಹಗಳು
೪. ಉತ್ತಂಗಿ ಚೆನ್ನಪ್ಪನವರು
೫. ರೆವರೆಂಡ್ ಚೆನ್ನಪ್ಪ ಉತ್ತಂಗಿ : ಜೀವನ ಹಾಗೂ ಕೃತಿಗಳು
೬. ಉತ್ತಂಗಿಯವರ ಉತ್ತುಂಗ ವಿಚಾರಗಳು
೭. ಚೆನ್ನಪ್ಪ ಉತ್ತಂಗಿ ಸಮಗ್ರ ಸಾಹಿತ್ಯ ಭಾಗ-೧ & ೨ ಇತ್ಯಾದಿ

ಸಾಹಿತ್ಯದ ಬಗ್ಗೆ ಒಲವು ಮೂಡಲು ಹಾಗೂ ಸಾಹಿತ್ಯ ರಚನೆಗೆ ಪ್ರೇರಣೆ ನೀಡಿದವನು ಸರ್ವಜ್ಞ ಎಂದು





ಕೃತಜ್ಞತೆಯಿಂದ ಸ್ಮರಿಸಿದ್ದಾರೆ. ಸರ್ವಜ್ಞ ಕವಿಯ ಸಂಶೋಧನೆಗೆ ಪ್ರೇರಣೆ ನೀಡಿದವರು ಪಾಶ್ಚಾತ್ಯ ವಿದ್ವಾಂಸ ಜೆ.ಜೆ. ಉರ್ನರರು. ಇದರಿಂದ ತಮ್ಮ ಜೀವನದಲ್ಲಿ ಶಾಂತಿಯನ್ನು ಕಳೆದುಕೊಂಡಿದ್ದ ಉತ್ತಂಗಿಯವರಿಗೆ ಮಾರ್ಗದರ್ಶನ ದೊರೆಯಿತೆಂದು ಸ್ಮರಿಸಿದ್ದಾರೆ.

ಸರ್ವಜ್ಞನು ಹೇಗೆ ತಮ್ಮ ಜೀವನದಲ್ಲಿ ಪ್ರಭಾವ ಬೀರಿದರೆಂಬುದನ್ನು ತಮ್ಮ ಆತ್ಮಚರಿತ್ರೆಯಲ್ಲಿ ಹೀಗೆ ಹೇಳಿಕೊಂಡಿದ್ದಾರೆ.

"ಹೀಗೆ ಭಗ್ನಾಶನಾಗಿ ಸಾಗುತ್ತಿದ್ದ ನನ್ನ ಜೀವನದ ಹಾದಿಯಲ್ಲಿ ಸರ್ವಜ್ಞನೆಂಬ ತಿರುಕನ ಸಂದರ್ಶನ ವಾಯಿತು. ಉಭಯತ ಹಾಡು ಒಂದೇ ಎಂದು ಅನಿಸಿತು. ಆಗ ನಾನು ಅವನಲ್ಲಿ ನನ್ನನ್ನು ಕಂಡೆ. ಇಬ್ಬರಿಗೂ ಮೇಳವಾಯಿತು. ಕರಿಗೆ ಕರಿ ಕೂಡಿದಂತಾಗಿ ಪರಸ್ಪರರಲ್ಲಿ 'ಹಿರಿದು ಸ್ನೇಹ' ಉಂಟಾಯಿತು. ಪ್ರಿಯನು ಪ್ರೇಯಸಿಯ ಭಾಷೆಯನ್ನು ಕಲಿಯುವಂತೆ – ನಾನು ಸರ್ವಜ್ಞನಿಗಾಗಿ ಕನ್ನಡ ಕಲಿತೆ. ಕನ್ನಡ ವ್ಯಾಕರಣ, ಛಂದಸ್ಸು, ಕಾವ್ಯ, ಅಲಂಕಾರ ಮುಂತಾದ ಶಾಸ್ತ್ರ ಗ್ರಂಥಗಳನ್ನು ಓದಿದ್ದು, ಸರ್ವಜ್ಞನ ಕಾರ್ಯವನ್ನು ಕೈಗೊಂಡ ನಂತರ. ನಾನು ವೀರಶೈವ ಧರ್ಮವನ್ನು ಅರಿತುಕೊಳ್ಳಲು ಯತ್ನಿಸಿದ್ದು ಸರ್ವಜ್ಞನಿಗಾಗಿಯೇ. ಇದೇ ಸಮಯಕ್ಕೆ 'ಜ್ಞಾನವೆಂದರೆ ಕ್ರಿಯೆ, ಕ್ರಿಯೆ ಎಂದರೆ ಜ್ಞಾನ' ಎಂದು ನನಗೆ ಮನವರಿಕೆಯಾದುದರಿಂದ ಕ್ರಿಯಾ ರಹಿತವಾದ ತತ್ತ್ವ ವಿಚಾರಕ್ಕೆ ವಿಮುಖನಾಗಿ, ಕ್ರಿಯಾ ಸಹಿತವಾದ ಅನುಭಾವಕ್ಕೆ ಅಭಿಮುಖನಾದೆ. ಮುತ್ತು ಕಳೆದುಕೊಂಡವನಿಗೆ ಮಾಣಿಕ್ಯವು ದೊರೆತಂತಾಯಿತು. ನನ್ನಿಂದ ಸಂಶೋಧಿಸಲ್ಪಟ್ಟ 'ಅನುಭವ ಮಂಟಪ'ವು ನನಗೆ ನೆರಮನೆಯಾಯಿತು. 'ಅನುಭವಿಯ ವೇದವೇ ವೇದ'ವೆಂಬ ಸರ್ವಜ್ಞನ ಅನುಭಾವ ಸೂತ್ರವು ನನಗೆ ಮಂಗಲ ಸೂತ್ರವಾಯಿತು. ಅನುಭಾವದ ಆಗರಗಳಾದ ಉಪನಿಷತ್ತು, ಭಗವದ್ಗೀತೆ, ವಚನ ಶಾಸ್ತ್ರ ಮುಂತಾದ ಉದ್ಗ್ರಂಥಗಳು ನನಗೆ ಪ್ರೀತಿ ಪಾತ್ರವಾದವು. ಪ್ಲೇಟೋ, ಕಾಂಟ, ಬ್ರ್ಯಾಡ್ಲೆ ಮುಂತಾದವರ ಮೇಲಿದ್ದ ಪ್ರೇಮವು, ವಿಲ್ಸನ್, ಜೇಮ್ಸ್, ಬರ್ಗಸನ್, ಬೋಹಿಮೆ, ಮುಂತಾದ ಅನುಭಾವಿಗಳತ್ತ ಹೊರಳಿತು. ಸರ್ವಜ್ಞ ಗ್ರಂಥವು ನನ್ನ 'ಓಂ' ಪ್ರಥಮ ಸಾಹಿತ್ಯವಾಯಿತು" ಎಂದು ದಾಖಲಿಸಿದ್ದಾರೆ.

ಕನ್ನಡ ನಾಡಿಗೆ ಸರ್ವಜ್ಞ ಕವಿಯನ್ನು ಪರಿಚಯ ಮಾಡಿಕೊಡಲು ಉತ್ತಂಗಿಯವರು ತಮ್ಮನ್ನು ಸಮರ್ಪಿಸಿಕೊಂಡರು. ಅವರ ದೃಷ್ಟಿಯಲ್ಲಿ ಸರ್ವಜ್ಞ ಒಬ್ಬ ವ್ಯಕ್ತಿಯಲ್ಲ, ಶಕ್ತಿಯಾಗಿ ಕಂಡರು. ಉತ್ತಂಗಿಯವರ ಪರಿಶ್ರಮದಿಂದ ಸರ್ವಜ್ಞ ಕನ್ನಡ ಸಾಹಿತ್ಯದ ಕಲ್ಪವೃಕ್ಷವಾಗಿ ಕಂಡನು. ಕನ್ನಡದ ಕ್ರಾಂತಿಪುರುಷನೆಂಬ ಹೆಗ್ಗಳಿಕೆಗೆ ಪಾತ್ರನಾದ. ದೀನರ, ದಲಿತರ, ಕೆಳಗೆ ಬಿದ್ದವರ, ಅಸ್ಪೃಶ್ಯರ ಶಂಖನಾದವಾಗಿ ಮೂಡಿಬಂದ. ಕನ್ನಡದ ಜಾನಪದ ಆದಿ ಮಹಾಕವಿಯೆಂಬ ಗೌರವಕ್ಕೆ ಪಾತ್ರನಾದ.

ಉತ್ತಂಗಿಯವರು ಗ್ರಂಥಗಳನ್ನು ರಚಿಸುವಾಗ ಆ ಗ್ರಂಥಗಳ ಬಗ್ಗೆ ಪೂರ್ವಭಾವಿಯಾಗಿ ವಿಫುಲವಾದ ಮಾಹಿತಿಯನ್ನು ಸಂಗ್ರಹಿಸಿ ತಮ್ಮ ಅಗಾಧವಾದ ಪಾಂಡಿತ್ಯದ ಹಿನ್ನೆಲೆಯಲ್ಲಿ ಗ್ರಂಥಗಳನ್ನು ರಚಿಸಿದರು. ಯಾವುದೇ ವಿಷಯವನ್ನು ಚಿಂತನೆಗೊಳಪಡಿಸಿ ಸಾದಾರವಾಗಿ ಅಭಿವ್ಯಕ್ತಪಡಿಸುವುದನ್ನು ಅವರ ಗ್ರಂಥಗಳಲ್ಲಿ ಗಮನಿಸಬಹುದಾಗಿದೆ. ವಿದ್ವಾಂಸರು ವ್ಯಕ್ತಪಡಿಸಿದ ಅನೇಕ ವಿವಾದ ವಿಚಾರಗಳಿಗೆ ತಾರ್ಕಿಕವಾಗಿ ಉತ್ತರ ನೀಡಿ ವಿದ್ವಾಂಸರನ್ನು ವಿಸ್ಮಯಗೊಳಿಸಿದುದು ಅವರಲ್ಲಿದ್ದ ಅಗಾಧವಾದ ಪಾಂಡಿತ್ಯ ಶ್ರೀಮಂತಿಕೆಯ ಪರಿಚಯವಾಗುತ್ತದೆ.

ಪ್ರೊ. ಡಿ.ಎಲ್. ನರಸಿಂಹಾಚಾರ್ಯರು 'ಸಿದ್ಧರಾಮ ಚಾರಿತ್ರ' ಗ್ರಂಥದ ಪ್ರಸ್ತಾವನೆಯಲ್ಲಿ 'ಸಿದ್ಧರಾಮ ಶಿವಯೋಗಿಯು ಶೈವನಿರಬೇಕೆ ಹೊರತು ಇಷ್ಟಲಿಂಗಧಾರಿಯಾದ ವೀರಶೈವನಾಗಿರಲಾರ' ಎಂದು ಪ್ರತಿಪಾದಿಸಿದರು. ಈ ಬಗ್ಗೆ ಪ್ರತಿವಾದಗಳು ನಿರಂತರವಾಗಿ ಸುಮಾರು ೧೫ ವರ್ಷಗಳ ಕಾಲ ವಿದ್ವಾಂಸರಲ್ಲಿ ಚರ್ಚೆಗಳು ನಡೆದವು. ಆದರೆ ಯಾರೂ ಸಮರ್ಪಕವಾಗಿ ಉತ್ತರ ಕೊಡಲು ವಿಫಲರಾದರು. ಕೊನೆಗೆ ಮಧ್ಯ ಪ್ರವೇಶಿಸಿದ ರೆವರೆಂಡ್ ಉತ್ತಂಗಿಯವರು ಸಿದ್ಧರಾಮನಿಗೆ ಚೆನ್ನಬಸವಣ್ಣ ನವರಿಂದ ಇಷ್ಟಲಿಂಗ ದೀಕ್ಷೆಯಾಗಿದೆಯೆಂಬುದನ್ನು ಆಧಾರಗಳಿಂದ ಸಿದ್ಧ ಮಾಡಿ ತೋರಿಸಿದರು. ಈ ಬಗ್ಗೆ ಡಾ. ಎಂ.ಬಿ. ಕೊಟ್ರಶೆಟ್ಟಿಯವರು "ಶ್ರೀಮಾನ್ ಉತ್ತಂಗಿ ಚೆನ್ನಪ್ಪನವರು ಸಿದ್ಧರಾಮ ಶಿವಯೋಗಿಯು ವೀರಶೈವತ್ವದ ಬಗೆಗಿನ ಸುದೀರ್ಘವಾದ, ಸತ್ಯ ನಿಷ್ಠವಾದ ಸೂಕ್ಷ್ಮ ವಿವೇಚನೆ ಭಿನ್ನಾಭಿಪ್ರಾಯಗಳನ್ನೆಲ್ಲ





ಜಾಳಿಸಿತು. ಜನಮನದಲ್ಲಿ ಎದ್ದ ಸಂಶಯದ ಧೂಳಿಯನ್ನು ಹಾರಿಸಿ ಆರೋಗ್ಯಪೂರ್ಣವಾದ ವಾತಾವರಣವನ್ನು ನಿರ್ಮಿಸಿತು. ಅವರ ವಿಚಾರಗಳನ್ನು ಮರಳಿ ಬೆದಕುವವರಿಗೆ ಎಂಟೆದೆ ಬೇಕೆನ್ನುವಂತಾಯಿ ತೆಂದು ಹೇಳಿದರೆ ಅತಿಯಶಯೋಕ್ತಿಯಾಗಲಾರದು' ಎಂದಿದ್ದಾರೆ. ಅವರ ಮಾತುಗಳು ಉತ್ತಂಗಿಯವರ ವಿದ್ವತ್‌ಗೆ ಭಾಷ್ಯ ಬರೆದಂತಿದೆ.

ಉತ್ತಂಗಿ ಚೆನ್ನಪ್ಪನವರು ಸಿದ್ಧರಾಮನ ಬಗ್ಗೆ ನೀಡಿದ ನಿರ್ಣಯವನ್ನು ಪ್ರೊ. ನರಸಿಂಹಚಾರ್ಯರು ಒಪ್ಪಿಕೊಂಡು 'ಸಿದ್ಧರಾಮ ಚರಿತ್ರೆ ಸಂಗ್ರಹ' ಗ್ರಂಥದ ಮರುಮುದ್ರಣದಲ್ಲಿ 'ಒಂದು ಸಮಸ್ಯೆ' ಎಂಬ ಭಾಗವನ್ನು ತೆಗೆದು ಹಾಕಿ ಹೃದಯ ಶ್ರೀಮಂತಿಕೆಯನ್ನು ಮೆರೆದರು. ಇದರಿಂದ ಪ್ರೊ. ಡಿ.ಎಲ್. ನರಸಿಂಹಾ ಚಾರ್ಯರವರ ಬಗೆಗಿನ ಗೌರವ ಮತ್ತಷ್ಟು ಹೆಚ್ಚಾಯಿತು. ಡಾ. ಹೆಚ್ ತಿಪ್ಪೇರುದ್ರಸ್ವಾಮಿಯವರು ಈ ಬಗ್ಗೆ ಅಭಿಪ್ರಾಯಪಡುತ್ತಾ 'ಅದು ಒಂದು ಕಡೆಯಲ್ಲಿ ಡಿ.ಎಲ್.ಎನ್. ರವರ ಹಿರಿಮೆ, ಇನ್ನೊಂದು ಕಡೆಯಲ್ಲಿ ಉತ್ತಂಗಿಯವರ ಸಂಶೋಧನೆಗೆ ದೊರೆತ ಯಶಸ್ಸು ಎಂದು ಹೇಳಬಹುದು' ಎಂಬ ಮಾತುಗಳು ಮೌಲಿಕವಾಗಿವೆ.

ರೆವರೆಂಡ್ ಉತ್ತಂಗಿ ಚೆನ್ನಪ್ಪನವರು ಒಬ್ಬ ಘನ ವಿದ್ವಾಂಸರು ಎಂಬುದಕ್ಕೆ ಅವರ ಸಮಕಾಲೀನ ವಿದ್ವಾಂಸರು, ಸಂಶೋಧಕರು, ಸಾಹಿತಿಗಳು, ಕವಿಗಳು ಮನದುಂಬಿ ವರ್ಣಿಸಿರುವುದು. ಅವರಲ್ಲಿ ಕೆಲವರನ್ನು ಹೆಸರಿಸುವುದಾದರೆ ಡಾ. ಫ.ಗು. ಹಳಕಟ್ಟಿ, ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ, ವ್ಯಾಕರಣ ತೀರ್ಥ ಚಂದ್ರಶೇಖರ್ ಶಾಸ್ತ್ರಿ, ಅ.ನಾ. ಕೃಷ್ಣರಾಯ, ಪ್ರೊ. ಸ.ಸ. ಮಾಳವಾಡ, ಮರವೀಡು ಕೃಷ್ಣರಾಯ, ಡಾ. ಡಿ.ಎನ್. ಕರ್ಕಿ, ಪ್ರೊ. ಶಿ.ಶಿ. ಬಸವನಾಳ, ರಾಷ್ಟ್ರಕವಿ ಗೋವಿಂದ ಪೈ, ಪ್ರೊ. ವಿ.ಕೃ. ಗೋಕಾಕ, ಆರ್.ಆರ್. ದಿವಾಕರ್, ಕವಿ ಚರಿತ್ರೆಕಾರ ಡಾ. ಆರ್. ನರಸಿಂಹಾಚಾರ್ಯ, ದೇವುಡು ನರಸಿಂಹಶಾಸ್ತ್ರಿ, ಡಾ. ಹೆಚ್. ತಿಪ್ಪೇರುದ್ರಸ್ವಾಮಿ, ಡಾ. ಎಂ. ಚಿದಾನಂದಮೂರ್ತಿ ಮುಂತಾದ ವಿದ್ವಾಂಸರು ಉತ್ತಂಗಿ ಚೆನ್ನಪ್ಪನವರನ್ನು ಹೃದಯ ತುಂಬಿ ಶ್ಲಾಘಿಸಿದ್ದಾರೆ.

**ಪ್ರಶಸ್ತಿ-ಗೌರವ :** 'ಸಿದ್ಧರಾಮ ಸಾಹಿತ್ಯ ಸಂಗ್ರಹ' ಗ್ರಂಥಕ್ಕೆ ದೇವರಾಜ ಬಹದ್ದೂರ್ ಪ್ರಶಸ್ತಿ ಲಭಿಸಿದೆ. ೧೯೪೯ ರಲ್ಲಿ ಕಲಬುರ್ಗಿಯಲ್ಲಿ ನಡೆದ ೩೦ನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದರು. ೧೯೪೯ ರಿಂದ ೧೯೫೦ ರ ವರೆಗೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು.

ವರಕವಿ ಡಾ. ದ.ರಾ. ಬೇಂದ್ರೆಯವರು ಚೆನ್ನಪ್ಪ ಉತ್ತಂಗಿಯವರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಅನುಪಮ ಸೇವೆಯನ್ನು ಕವನದ ಮೂಲಕ ಪ್ರಶಂಸಿಸಿದ್ದಾರೆ.

**ಹೆಸರು 'ಚೆನ್ನ'ನಾಗಿಯೇನು ಕೃತಿಯು ಚೆನ್ನವಿರದಿರೆ'**
**ಹೆಸರಾಯಿತು ನಿಮ್ಮ ಹೆಸರು ಅಂತು ನೀವು ಬರೆದಿರಿ**
**'ಅಂಗ ಉತ್ತು, ಲಿಂಗ ಬಿತ್ತು' ಎಂಬ ಜನ್ಮಸಾರ್ಥಕವು**
**ಸರ್ವಜ್ಞ ವಚನಗಳಿಗೆ ಇರುವ ಮೂಲ ಅರ್ಥವು**
**ನುಡಿಯು ಧ್ಯಾನದಲ್ಲಿ ನೀವು ನಡೆಯ ನಡೆಸಿ ಇಂದಿಗೆ**
**'ಉತ್ತುಂಗ'ರಾದಿರೆಂದೆ 'ಪೂಜ್ಯ'ರೆಲ್ಲ ಮಂದಿಗೆ.**

ಎಂದು ಅಂಗದಲ್ಲಿ ಲಿಂಗ ಗುಣಗಳನ್ನು ಅಳವಡಿಸಿ ಕೊಂಡಿದ್ದ ಉತ್ತುಂಗ ವ್ಯಕ್ತಿ. ಉತ್ತಂಗಿಯವರನ್ನು ಗುಣಗಾನ ಮಾಡಿದ್ದಾರೆ, ಅಲ್ಲದೆ ರಾಷ್ಟ್ರಕವಿ ಕುವೆಂಪುರವರು ಉತ್ತಂಗಿಯವರಿಗೆ ೬೦ ವರ್ಷ ತುಂಬಿದ ಶುಭ ಸಂದರ್ಭದಲ್ಲಿ ಕವನದ ಮೂಲಕ ನುಡಿನಮನ ಸಲ್ಲಿಸಿರುವುದು ಅವರ ವಿದ್ವತ್ತಿಗೆ ನೀಡಿದ ಮಹಾಗೌರವವಾಗಿದೆ.

ಉತ್ತಂಗಿ ಚೆನ್ನಪ್ಪನವರ ತಾತ ಹಿಂದೂ ಧರ್ಮದವರಾಗಿದ್ದು, ಜೀವನದಲ್ಲಿ ಸಂಭವಿಸಿದ ಕೆಲವು ಅನಿರೀಕ್ಷಿತ ಘಟನೆಗಳಿಂದ ಮನನೊಂದು ಶಾಂತಿ, ನೆಮ್ಮದಿಯನ್ನು ಪಡೆಯಲು ಮುಂದಾಲೋಚನೆ, ದೂರ ದೃಷ್ಟಿಯ ಕೊರತೆಯಿಂದಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡರೂ, ಅವರ ಆಚಾರ, ವಿಚಾರಗಳು, ಪ್ರೀತಿ ವಿಶ್ವಾಸಗಳ ಬೇರುಗಳು ಹಿಂದೂ ಧರ್ಮದ ಮಹಾ ವೃಕ್ಷದಲ್ಲಿ ಇದ್ದುದರಿಂದ ಶತಶತಮಾನಗಳಿಂದ ವಂಶವಾಹಿನಿಯಾಗಿ ಹರಿದುಬಂದ ಸಂಸ್ಕೃತಿ ಚೆನ್ನಪ್ಪನವರಲ್ಲಿ ಅಂತರ್ಗತವಾಗಿರುವುದರಿಂದಲೇ ಸರ್ವಜ್ಞ, ಬಸವಾದಿ ಶರಣರನ್ನು ಕುರಿತು ಮೌಲಿಕ ಗ್ರಂಥಗಳನ್ನು ರಚಿಸಲು ಸಾಧ್ಯವಾಯಿತು. ೮೧ ವಸಂತಗಳ ಬೇವುಬೆಲ್ಲವನ್ನು ಸವಿದು ಸಾಹಿತ್ಯ ಕ್ಷೇತ್ರದಲ್ಲಿ ಮುನ್ನಡೆದು ಆಗಸ್ಟ್ ೨೮, ೧೯೬೨ ರಂದು ವಿಧಿವಶರಾದರು. ಅವರು ಕೊಟ್ಟು, ಬಿಟ್ಟು ಹೋದ ಸಾಹಿತ್ಯ ಕೃತಿಗಳು, ಜೀವನಮೌಲ್ಯಗಳು ಸದಾ ನಮ್ಮೊಂದಿಗಿರುತ್ತವೆ. ■

(ಮಾಹಿತಿ ಸೌಜನ್ಯ : ಸ್ಮರಣೀಯರು-ಸಂ. ಡಾ.ಎಚ್.ಎಂ. ಮರುಳಸಿದ್ಧಯ್ಯ)

ಚಿಂತನೆ

# ನನ್ನೊಳಗಿನ ಬೆಳವಣಿಗೆ

– ಶ್ರೀ ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು *

ಮುತ್ತು ಕಳೆದರೆ ಸಿಕ್ಕೀತು, ಹೊತ್ತು ಕಳೆದರೆ ಸಿಗದು ಎಂಬ ಗಾದೆಯ ಮಾತೊಂದಿದೆ. ಸಮಯಕ್ಕೆ ಅಷ್ಟು ಮಹತ್ವವಿದೆ. ನಾವು ಬಹುತರ ಮಂದಿ ವರ್ಷಂಪ್ರತೀ ನಮ್ಮ ಹುಟ್ಟುಹಬ್ಬಗಳನ್ನು ಆಚರಣೆ ಮಾಡಿಕೊಂಡು ಸಂಭ್ರಮಿಸುವುದಿದೆ. ಸಂತೋಷದ ಅಮಲಿನಲ್ಲಿ ಪಾರ್ಟಿಗಳನ್ನು ಮಾಡುವವರೂ ಇದ್ದಾರೆ. ಸಾಕಷ್ಟು ರೀತಿಯ ಬಳುವಳಿಗಳೂ ಬರುತ್ತವೆ. ಈ ಸಂಭ್ರಮದ ಪರಾಕಾಷ್ಠೆಯನ್ನು ನಾವು ಯುವಕರಲ್ಲಿ ಅತೀ ಹೆಚ್ಚಾಗಿ ಕಾಣಬಹುದು. ಇದೇ ರೀತಿಯ ಸಂಭ್ರಮವನ್ನು ನಾವು ಹೊಸ ವರ್ಷದ ಆಚರಣೆಗಳಲ್ಲಿಯೂ ಕಾಣಬಹುದು. ನಡುರಾತ್ರಿಯವರೆಗೆ ಕಾದಿದ್ದು ಸರಿಯಾಗಿ ೧೨ ಗಂಟೆ ಆದೊಡನೆಯೇ ನಮ್ಮ ಸಂತಸ, ಆನಂದದ ಕಟ್ಟೆ ಒಡೆಯುತ್ತದೆ. ಹುಟ್ಟು-ಹಬ್ಬಗಳೇ ಇರಬಹುದು, ವರ್ಷಾಚರಣೆಗಳೇ ಇರಬಹುದು, ಇವೆರಡನ್ನು ಆಚರಿಸುವಾಗಲು ನಾವು ಮೂಲತತ್ತ್ವವನ್ನು ಮರೆಯುತ್ತೇವೆ. ಓರ್ವ ಸಾಹಿತಿ, ಹೊಸವರ್ಷವೆಂದರೆ ಬದಲಾಗುವ ದಿನಗಳಲ್ಲ, ನಮ್ಮೊಳಗಿನ ಬೆಳವಣಿಗೆ; ಕಾಲವೆಂದರೆ ಗಡಿಯಾರವಲ್ಲ, ನಮ್ಮೊಳಗಿನ ಅನುಭವ, ಎನ್ನುವ ಮಾತನ್ನು ಹೇಳುತ್ತಾರೆ.

ವರ್ಷಾಚರಣೆಯ, ಹುಟ್ಟುಹಬ್ಬದ ಸಂದರ್ಭದಲ್ಲಿ ನಮ್ಮ ಬೆಳವಣಿಗೆಯನ್ನು, ನಮ್ಮೊಳಗಾದ ಬದಲಾವಣೆಗಳ ಕಡೆಗೆ ನೋಡಿದರೆ ಶೂನ್ಯ ಎದ್ದು ಕಾಣುತ್ತದೆ. ತರುವಾಯ ನಾವು ಪಶ್ಚಾತ್ತಾಪ ಪಟ್ಟರೂ ಸಮಯವಾಗಲೀ, ಆಯುಸ್ಸಾಗಲೀ ನಮಗೆ ದೊರಕದು. ಒಂದು ಸಣ್ಣ ದೃಷ್ಟಾಂತ ನೆನಪಿಗೆ ಬರುತ್ತದೆ. ಒಂದು ಹಣ್ಣು ಹಣ್ಣು ಮುದುಕಿ ಸಂಪೂರ್ಣ ಬೆನ್ನು ಬಾಗಿದ ಅಜ್ಜಿ. ಮಾರ್ಗದಲ್ಲಿ ಉರುಗೋಲನ್ನು ಹಿಡಿದು, ಹೋಗುತ್ತಾ ಇರುವಾಗ ಎದುರಿನಿಂದ ಬಂದ ಯುವಸಮೂಹ ಅಜ್ಜಿಯನ್ನು ಅಪಹಾಸ್ಯ ಮಾಡುತ್ತಾ "ಏನಜ್ಜೀ ಏನನ್ನೋ ಕಳೆದುಕೊಂಡಿರುವಂತಿದೆ, ಏನನ್ನು ಹುಡುಕುತ್ತಿದ್ದೀಯಾ" ಎಂದು ಪ್ರಶ್ನಿಸಿದರು. ಅವರ ಮುಖವನ್ನೊಮ್ಮೆ ನೋಡಿದ ಅಜ್ಜಿ ಖಿನ್ನಳಾಗಿ ಹೌದಪ್ಪಾ, ಬದುಕಿನಲ್ಲಿ ನಾನು ಮಹತ್ತರವಾದುದನ್ನು ಕಳೆದುಕೊಂಡಿದ್ದೇನೆ. ಅದೆಂದು ಹಿಂತಿರುಗಿ ಬರದು; ಅದನ್ನು ಹುಡುಕುತ್ತಿದ್ದೇನೆ, ಎನ್ನುತ್ತದೆ. ಏನಜ್ಜೀ, ಅದು ಎಂದಾಗ ನನ್ನ ಅಮೂಲ್ಯವಾದ ಸಮಯವನ್ನು, ಏನು ಬೇಕಿದ್ದರೂ ಸಾಧಿಸಬಹುದಾಗಿದ್ದ ನನ್ನ ಯೌವನವನ್ನು ಕಳೆದುಕೊಂಡಿದ್ದೇನೆ. ಈಗ ಎಷ್ಟು ಅರಸಿದರು ಅದು ದೊರೆಯಲೊಲ್ಲದು ಎಂದಾಗ ಯುವಕರಿಗೆ ಅಜ್ಜಿಯನ್ನು ಛೇಡಿಸಿದ್ದಕ್ಕೆ ಪಶ್ಚಾತ್ತಾಪವಾಯಿತಲ್ಲದೇ ತಮ್ಮ ಬದುಕಿನ ಮಹತ್ವವನ್ನು ಅರಿತುಕೊಳ್ಳಲು ಸಾಧ್ಯವಾಯಿತು. ಒಮ್ಮೆ ಆಲೋಚಿಸೋಣ, ನಮ್ಮೊಳಗೆ ಬದಲಾವಣೆಗಳು ಸಂಭವಿಸಿವೆಯೇ?

> **ಬಾಲ್ಯ, ಯವ್ವನ, ಮುಪ್ಪುಗಳ ಹಾದಿಯಲಿ ಯವ್ವನಕೆ ಸೊಬಗಿನ ಹಂಗು**
> **ಯವ್ವನದ ಸಮಯದೊಳು ಸರಿಬಾಳು ಬಾಳದಿರೆ**
> **ಮೊಗದಿ ಅವಿವೇಕದ ಬಂಗು**
>
> – ಡಾ. ಎಂ.ಜಿ. ನಾಗರಾಜ್

* ಅಧ್ಯಕ್ಷರು, ಅರಮೇರಿ-ಕಳಂಚೇರಿ ಮಠ, ವೀರರಾಜೇಂದ್ರ ಪೇಟೆ ತಾ।।, ಕೊಡಗು ಜಿಲ್ಲೆ-೫೭೧೨೧೮



ನುಡಿನಮನ

# ನೂರ ಹನ್ನೊಂದರ ತಪಸ್ವಿಯ 'ಆತ್ಮ ವೈಭವ'

– ವಿದ್ವಾನ್ ಎಸ್. ಷಡಕ್ಷರಯ್ಯ *

'ಆಡಬಾರದಾ ಬಯಲು, ನೋಡ ಬಾರದ ಬಯಲು, ನುಡಿಯ ಬಾರದ ಬಯಲು, ಈ ಒಡಲಿಲ್ಲದ ಬಯಲೊಳು, ಅಡಗಿಪ್ಪ, ಭೇದವ, ಲೋಕದ ಜನರೆತ್ತ ಬಲ್ಲರೈ ರಾಮನಾಥಾ!

ವೀರಶೈವದಲ್ಲಿ ಅಸಂಖ್ಯಾತ ಮಹಾಪುರುಷರು, ಲಿಂಗಜ್ಞಾನಿಗಳು, ಪರಮ ವಿರಕ್ತರು, ಶಿವಶರಣರು, ನಿತಾಂತ ಭಕ್ತರು ಅವತರಿಸಿದ್ದಾರೆ. ಆ ಪರಂಪರೆ ಅವಿಚ್ಛಿನ್ನವಾಗಿ ಇಂದೂ ಶಿವಯೋಗ ಲೀಲೆಯಲ್ಲಿ ಮೆರೆಯುತ್ತಿದೆ. ಇಂಥ ಧಾರ್ಮಿಕ ಹಿನ್ನೆಲೆಯಲ್ಲಿ 'ನೂರ ಹನ್ನೊಂದರ ವಯೋತಪಸ್ವಿ' ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ 'ಆತ್ಮ ವೈಭವ' ವನ್ನು ನೋಡಬೇಕು. ಜೀವನ ಸೌಂದರ್ಯವನ್ನು ಕಾಣಬೇಕು.

**ಶಿವಯೋಗಿ :** ನನ್ನ ವಿದ್ಯಾರ್ಥಿ ಹಾಗೂ ವೃತ್ತಿ ಜೀವನದಲ್ಲಿ ಕಂಡಂತೆ, ಅಥವಾ ಪ್ರತ್ಯಕ್ಷ ಕಂಡವರಿಗೆ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಕೇವಲ ಶಿವಯೋಗಿಯೋ, ಸಂತನೋ ಅಥವಾ ದಾಸೋಹಿಯೋ ಮಾತ್ರವಲ್ಲ, ಅವರ ಜೀವನ ಸುಂದರ ತಪೋವನದಂತಿದೆ. ಅವರು ಸಂಸ್ಕಾರ ಬಲದಿಂದಲೇ ಅವರಲ್ಲಿ ಶಿವಶಕ್ತಿ ಹುಟ್ಟಿ ಸಿದ್ಧಪುರುಷರಾದಂತಿದೆ. ಸಿದ್ಧಗಂಗೆಯ ತಪೋಮಂಟಪದಲ್ಲಿನ ಅವರ ಭಾವಪೂಜೆಯಿಂದ ವಿಶ್ವಶಕ್ತಿಯ ಆರಾಧನೆಯಾಗುತ್ತಿದೆ. ವಿವಿಧ ಬಗೆಯ ಅರಳಿದ ಹೂವಿನಿಂದ ಪೂಸಿದ ಶಿವಲಿಂಗ ಪೂಜೆಯಿಂದ ಹೂವಿನ ಸೌರಭದಿಂದ ಅವರು ಆತ್ಮಲಿಂಗಾನಂದವನ್ನು ಪಡೆಯುತ್ತಿರುವರು. ದೊರೆತ ಹಣ್ಣು ಆಹಾರಗಳ ಸವಿಯನ್ನು ಆತ್ಮಲಿಂಗಾರ್ಪಣೆ ಮಾಡುವರು. ಶಿವಭಾವ ಪರಮೇಶ್ವರನಿಗೆ ನಿಜಭಕ್ತಿ ಗಂಗಾಭಿಷೇಕ ಮಾಡುವರು. ಶಿವಲಿಂಗ ಧ್ಯಾನದಲ್ಲಿ ಮೈಮರೆಯುವರು. ವಿಶ್ವವೇ ಅವರಿಗೆ ಶಿವಮಯವಾಗುತ್ತದೆ. ಧ್ಯಾನಾನಂತರ ಬಂದ ಭಕ್ತರಿಗೆ, ಭಸ್ಮ, ತೀರ್ಥೋದಕ ನೀಡಿ ಆನಂದಿಸುವರು. ಇಂತಹ ಈ ಪೂಜಾನಿಷ್ಠ ಯೋಗಿಯನ್ನು '**ಶಿವಯೋಗಿ**' ಎಂದು ಲೋಕ ಅರಿಯಿತು.

**ಗುರುಕುಲ :** ಶ್ರೀ ಶ್ರೀ ಶಿವಕುಮಾರ ಶಿವಯೋಗಿಯವರ ಕೀರ್ತಿ ಹಬ್ಬಿತು. ಅವರ ಶಿಷ್ಯವೃಂದ ಬೆಳೆಯಿತು. ಸಿದ್ಧಲಿಂಗೇಶ್ವರರ ಸಾನ್ನಿಧ್ಯದಲ್ಲಿ ಅವರಿಗೆ ಮನಶ್ಶಾಂತಿ ಲಭಿಸಿತು. ತ್ರಿವಿಧದಾಸೋಹಿಯಾದರು. ಅಲ್ಲಿನ ಪುಣ್ಯಾವರಣದಲ್ಲಿ ಅವರ ಆತ್ಮ ಪರಿಪೂರ್ಣ ಸ್ಥಿತಿಗೆ ಬಂತು. ಸಹಸ್ರಾರು ಶಿಷ್ಯರನ್ನು ಆಕರ್ಷಿಸಿತು. ಸಿದ್ಧಗಂಗೆಯೊಂದು ಮಹಾ ಗುರುಕುಲವಾಯಿತು.

**ಆತ್ಮಾನಂದಮಯಿ :** ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ಲೋಕೋಪಯೋಗಿ ಕಾರ್ಯಗಳಲ್ಲಿ ವಿದ್ಯಾರ್ಥಿಗಳು ಶ್ರದ್ಧೆಯಿಂದ ಶ್ರಮದಾನ ಮಾಡುತ್ತಿರುತ್ತಾರೆ. ಶ್ರೀ ಕ್ಷೇತ್ರದಲ್ಲಿ ಪೋಷಿಸುತ್ತಿರುವ ಪಶುಪಕ್ಷಿ ಜೀವರಾಶಿಗಳಿಗೆಲ್ಲಾ ನೀರು ದೊರೆಯಬೇಕೆಂಬ ದೃಷ್ಟಿಯಿಂದ ಕ್ಷೇತ್ರದ ಆವರಣದಲ್ಲಿ ನೀರಿನ ಕೊಳಾಯಿಗಳನ್ನು ನಿರ್ಮಿಸಿದ್ದಾರೆ. ಮಠದಲ್ಲಿ ನಿತ್ಯ ಹಸಿದು ಬಂದವರಿಗೆ ದಾಸೋಹ, ವಿವಿಧ ರೋಗ ರುಜಿನಗಳಿಂದ ಬಂದ ಆರ್ತರನ್ನು ಸಂತೈಸಿ ದುಃಖಿಗಳನ್ನು ಪ್ರೀತಿಸಿ, ರೋಗಿಗಳನ್ನು ಆದರಿಸಿ ಆತ್ಮಾನಂದಮಯರಾಗುವರು.

**ಪರಮ ದಯಾಳು :** ಶಿವಪೂಜೆಯೊಂದೇ ಆ ಶಿವಯೋಗಿಯ ತಪಸ್ಸಲ್ಲ, ಎಲ್ಲ ಕರ್ಮವೂ ತಪಸ್ಸೇ! ಅವರು ಮಠದ ಆವರಣದಲ್ಲಿ ಅಡ್ಡಾಡುತ್ತಾ ದನದ ಕೊಟ್ಟಿಗೆಯಲ್ಲಿ ಎಳೆಗರುಗಳ ಮೈದಡವಿ ಮುದ್ದಿಸಿ ಆನಂದಿಸುತ್ತಿದ್ದರು. ಸಕಲ

* 'ಪವನಶ್ರೀ', ೨೮ನೇ ಕ್ರಾಸ್, ಮಲ್ಲಿಗೆ ರಸ್ತೆ ಎಸ್.ಐ.ಟಿ. ಬಡಾವಣೆ, ತುಮಕೂರು-೫೭೨ ೧೦೩







ಜೀವಾವಳಿಗೆ ಲೇಸನೇ ಬಯಸುವ ಪರಮ ದಯಾಳು. ವೃಷಭಗಳನ್ನು ನೋಡಿ ಸಾಕ್ಷಾತ್ ನಂದೀಶ್ವರನೆಂದು ಆದರಿಸುತ್ತಾರೆ. ಅವರ ಅಮೃತ ಸ್ಪರ್ಶದಿಂದ, ಗೋಕುಲವೆಲ್ಲ ಮೈದುಂಬಿ ಹಿಗ್ಗುತ್ತಿತ್ತು. ಅವರ ಕೃಷಿ ಆಸಕ್ತಿ ಕೃಷಿಕರನ್ನು ನಾಚಿಸುವಂತಿದೆ.

**ದೈವಗುಣ** : ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೆಂದರೆ ಕೇವಲ ಕಾಷಾಂಬರದಾರಿ ವಿರಕ್ತರಲ್ಲ. ಅವರ ಮನೋಧರ್ಮ ವಿಶ್ವಪ್ರೇಮಮಯವಾದುದು. ಅವರ ಪರಿಶುದ್ಧಾಂತಕರಣದಲ್ಲಿ ವೀರ ವೈರಾಗ್ಯವೇ ಮೂರ್ತಿವೆತ್ತಂತಿದೆ. ಅವರ ಮನಸ್ಸು ಕುಸುಮ ಕೋಮಲ, ಸಹಜವಾಗಿ, 'ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ' (ಉ.ರಾ.ಚರಿತ) ಅವರಲ್ಲಿ ಸಕಲ ದೇವಗುಣಗಳೇ ಮೂಡಿ ಬರುತ್ತವೆ.

**ಪರಮ ಸಿದ್ಧ** : ಮನೋನಿಗ್ರಹ ಅತ್ಯಂತ ಕಠಿಣ, ಮನೋನಿಗ್ರಹವಿಲ್ಲದೆ ಯೋಗ ಸ್ಥಿತಿಯಿಲ್ಲ, ಯೋಗ ಸಿದ್ಧಿಯಾದರೆ ಜೀವನ್ಮುಕ್ತಿ. ಶಿವಯೋಗ ಸಾಧನೆಯಿಂದ ಕರಣಗಳನ್ನೆಲ್ಲ ಲಿಂಗ ಕಿರಣಗಳನ್ನಾಗಿಸಿಕೊಂಡಿರುವ ಪರಮ ಸಿದ್ಧರು.

**ಸಿದ್ಧ ಪ್ರಸಾದ** : ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಶಿವತೀರ್ಥ ಪ್ರಸಾದಗಳಿಂದ ತಾವು ಮಾತ್ರ ಪುನೀತನಾಗಲು ಇಷ್ಟಪಡುವವರಲ್ಲ. ಸಕಲ ಪ್ರಾಣಿ ಸಮುದಾಯವೂ ಉದ್ಧಾರವಾಗಬೇಕೆಂಬ ಸಂಕಲ್ಪವುಳ್ಳವರು. ಒಮ್ಮೆ ಶ್ರೀ ಮಠದಲ್ಲಿ ವಿದ್ಯಾರ್ಥಿ ಶಿಷ್ಯ ವೃಂದವೆಲ್ಲ ಪ್ರಸಾದ ನಿಲಯದಲ್ಲಿ ಬೆಳಗಿನ ಪ್ರಸಾದ ಸ್ವೀಕಾರದಲ್ಲಿ ನಿರತರಾಗಿದ್ದರು. ಆಗ ನಾನು ಹತ್ತನೆಯ ತರಗತಿಯಲ್ಲಿ ಅಭ್ಯಾಸ ಮಾಡುತ್ತಿದ್ದವನು. ಆಗ ಒಂದು ಹಲ್ಲಿ ಎಲ್ಲಿಂದಲೋ ಬಂದು ಭೋಜನ ತಯಾರಿಸಿ ಸಂಗ್ರಹಿಸುವ ಪಾಕಶಾಲೆಯಲ್ಲಿನ ಸಾಂಬಾರು ಶೇಖರಿಸಿದ್ದ ಕೊಳಗದೊಳಗೆ ಸತ್ತು ಬಿದ್ದು ತೇಲುತ್ತಿತ್ತು. ಅಡಿಗೆ ಭಟ್ಟರು-ಉಣಬಡಿಸುವವರು, ಅದನ್ನು ಹೊರತೆಗೆದು, ಊಟಕ್ಕೆ ಸಾಂಬಾರು ಹಾಕುತ್ತಿದ್ದರು. ದಿನನಿತ್ಯದಂತೆ ಪೂಜ್ಯ ಶ್ರೀಗಳು ಊಟದ ಕೋಣೆಗೆ ದಯಮಾಡಿಸಿದರು. ಪೂಜ್ಯರಿಗೂ ವಿಷಯ ತಿಳಿಯಿತು. ಕೂಡಲೇ ಇದು ವಿಷಮಯವಾದಿತೆಂದು ತಿಳಿದು ಕೊಳಗದ ಸಾಂಬಾರು ಮತ್ತು ಎಲ್ಲರ ಊಟದ ತಟ್ಟೆಯಲ್ಲಿ ಬಡಿಸಿದ, ಎಲ್ಲಾ ಸಾಂಬಾರನ್ನು ಹೊರ ಚೆಲ್ಲಿಸಿ, ಹೊಸದಾಗಿ ತಯಾರಿಸಿ ಉಣಬಡಿಸಿದರು. ಇದು ಶ್ರೀಗಳ ಶುದ್ಧ-ಸಿದ್ಧ ಪ್ರಸಾದದ ಪ್ರತೀಕ.

**ಬಾಳಬೆಳಕು** : ಶಿವಯೋಗಿಯ ಸನ್ನಿಧಿಯಲ್ಲಿ ಯಾರಿಂದಲೂ ನೋವು ಬೇನೆಗಳಿರಬಾರದು. ದುಃಖ ದಾರಿದ್ರ್ಯಗಳಿರಬಾರದು. ವಿದ್ರೋಹ ವಂಚನೆಗಳಿರ ಬಾರದು. ಅಂದ ಹಾಗೆ ನಾನು ಈ ದಿವ್ಯ ಸನ್ನಿಧಿಯ ಅಶ್ರಯ ಮತ್ತು ವಿದ್ಯಾಲಯದಲ್ಲಿಯೇ ಪ್ರೌಢಶಾಲೆಯಿಂದಲೂ ಸಾಧ್ಯವಾದಷ್ಟು ವಿದ್ಯಾಭ್ಯಾಸ ಮಾಡಿ, ವಿವಿಧ ಪದವಿಗಳನ್ನು ಪಡೆದೆನು. ನಂತರ ಬಾಳ ಬೆಳಕಿಗೆ ವೃತ್ತಿಯ ಅವಲಂಬನೆ ಅನಿವಾರ್ಯವೆನಿಸಿದಾಗ, ಶ್ರೀ ಕ್ಷೇತ್ರ ಹೊರತಾದ ಖಾಸಗಿ ಸಂಸ್ಥೆಯೊಂದರಲ್ಲಿ ಉದ್ಯೋಗವು ದೊರೆಯಿತು. ಹಾಗಾಗಿ ತ್ರಿವಿಧ ದಾಸೋಹಿಯವರ ಆಶೀರ್ವಾದ ಬೇಡಿದೆ, ಕೆಲವು ನಿಮಿಷ ತಟಸ್ಥರಾದರು. 'ಸದ್ಯಕ್ಕೆ ಹೋಗಿರು ಕರೆಸಿ ಕೊಳ್ಳುತ್ತೇನೆ' ಎಂದು ಅಪ್ಪಣೆ ಕೊಟ್ಟರು. ನಾನು ಬೇರೆ ಕಡೆ ವೃತ್ತಿಗೆ ಸೇರಿಕೊಂಡ ಕೆಲವೇ ತಿಂಗಳಲ್ಲಿ ಶ್ರೀ ಕ್ಷೇತ್ರದ ಸಂಸ್ಕೃತ ಮಹಾಪಾಠ ಶಾಲೆಯಲ್ಲಿ 'ಅಧ್ಯಾಪಕ ವೃತ್ತಿಗೆ' ಆದೇಶ ಪತ್ರವನ್ನು ಕಳಿಸಿಯೇ ಬಿಟ್ಟರು. ಬಂದು ಸೇರಿಕೊಂಡೆ. ಗುರುವಿನ 'ಆತ್ಮ ವೈಭವದಿಂದ' ಬಾಳಲ್ಲಿ ಬೆಳಕು ಕಂಡೆ.

ಶ್ರೀ ಅಟವೀಶ್ವರರ ಕನಸು, ಶ್ರೀ ಉದ್ಧಾನೇಶ್ವರರ ನನಸು ಶ್ರೀ ಶ್ರೀ ಶಿವಕುಮಾರ ಶಿವಯೋಗಿಯವರ ಮನಸು, ಈ ಶಕ್ತಿತ್ರಯಗಳಿಂದ, ಇಂದು ಸಾವಿರಾರು ವಿದ್ಯಾರ್ಥಿ ಗಳಿಗೆ ಅಧ್ಯಯನ ಕೇಂದ್ರ, ಉದ್ಯೋಗಿಗಳಿಗೆ ಆಶ್ರಯ ತಾಣವಾಗಿ ಕಂಗೊಳಿಸುತ್ತಾ, ವಿಸ್ತಾರಗೊಂಡಿರುವ ಸಂಸ್ಕೃತ ಮಹಾಪಾಠಶಾಲೆಯಲ್ಲಿ ನಿವೃತ್ತನಾಗುವವರೆಗೂ ಸೇವೆ ಸಲ್ಲಿಸಿದೆ. ಅಧ್ಯಾಪಕರ ವೃಂದ ವಿದ್ಯಾರ್ಥಿವೃಂದ ಅಪ್ಯಾಯಮಾನವಾಗಿತ್ತು. ಪೂಜ್ಯ ಶ್ರೀಗಳು ನನ್ನ ಬಾಳಿಗೆ ಬೆಳಕು ನೀಡಿದರು. ಕೃತಜ್ಞತಾ ಪೂರ್ವಕವಾಗಿ ನೂರ ಹನ್ನೊಂದನೆಯ ಈ ವಯೋ ತಪಸ್ವಿಯ ಆತ್ಮ ವೈಭವಕ್ಕೆ ದೀರ್ಘದಂಡ ಪ್ರಣಾಮಗಳು.







## ಅಭಿನಂದನೆ

# ರಾಜ್ಯ ಶಿಕ್ಷಕ ಪ್ರಶಸ್ತಿ ಪುರಸ್ಕೃತ ಶ್ರೀ ಹರಳೂರು ಶಿವಕುಮಾರ್

ಕರ್ನಾಟಕ ಸರ್ಕಾರ ಪ್ರಶಕ್ತ ಸಾಲಿನಲ್ಲಿ ಕೊಡಮಾಡುವ ರಾಜ್ಯ ಶಿಕ್ಷಕ ಪ್ರಶಸ್ತಿಗೆ ಶ್ರೀ ಸಿದ್ಧಗಂಗಾ ಮಠದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆಯಲ್ಲಿ ಸಹ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವ ಕವಿ, ಆಧುನಿಕ ವಚನಕಾರ, ಲೇಖಕ ಶ್ರೀ ಹರಳೂರು ಶಿವಕುಮಾರ್ ಅವರು ಆಯ್ಕೆಯಾಗಿರುವುದಕ್ಕೆ ಸಿದ್ಧಗಂಗಾ ಮಾಸಪತ್ರಿಕೆ ಹೃತ್ಪೂರ್ವಕವಾಗಿ ಅಭಿನಂದನೆಗಳನ್ನು ಹಾಗೂ ಶುಭಾಶಯವನ್ನು ಸಲ್ಲಿಸುತ್ತಿದೆ.

ಪ್ರಶಸ್ತಿ ದೊರತಿದ್ದುದಕ್ಕೆ ದೂರವಾಣಿ ಮೂಲಕ ಅಭಿನಂದನೆ ಸಲ್ಲಿಸಿದಾಗ, ಅದಕ್ಕೆ ಪ್ರತಿಕ್ರಿಯಿಸಿದ ಶ್ರೀ ಶಿವಕುಮಾರ ಅವರು 'ಪರಮಪೂಜ್ಯ ಶ್ರೀ ಶ್ರೀಗಳಿರ್ವರ ದಿವ್ಯಾಶೀರ್ವಾದ, ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಆಡಳಿತ ವರ್ಗ, ನಮ್ಮ ಶಾಲೆಯ ಮುಖ್ಯ ಶಿಕ್ಷಕರು ಹಾಗೂ ಸಹೋದ್ಯೋಗಿಗಳ ಪ್ರೋತ್ಸಾಹ, ಸಹಕಾರ ಕಾರಣವೆಂದು' ಕೃತಜ್ಞತೆಯಿಂದ ಸ್ಮರಿಸಿದುದು ಅವರಲ್ಲಿನ ಸರಳತೆ, ಸಜ್ಜನಿಕೆ, ವಿನಯವಂತಿಕೆಯನ್ನು ಸೂಚಿಸುತ್ತದೆ.

ಶ್ರೀ ಶಿವಕುಮಾರ ಅವರು ಶ್ರೀ ವೀರಭದ್ರೇಶ್ವರ ಪಾವನ ಕ್ಷೇತ್ರವಾದ ತುಮಕೂರು ತಾಲ್ಲೂಕು ಹರಳೂರಿನಲ್ಲಿ ಮೇ ೨೯, ೧೯೬೫ ರಂದು ಜನಿಸಿದರು. ತಂದೆ ಶರಣ ಶ್ರೀ ಶಂಭುಲಿಂಗಯ್ಯ, ತಾಯಿ ಶರಣೆ ಶ್ರೀಮತಿ ಸಾಕಮ್ಮ.

ಪ್ರಾಥಮಿಕ ಶಿಕ್ಷಣವನ್ನು ಹರಳೂರಿನಲ್ಲಿ ಪಡೆದ ಶ್ರೀಯುತರು ಪ್ರೌಢ ಶಿಕ್ಷಣಕ್ಕೆ ಶ್ರೀ ಸಿದ್ಧಗಂಗಾ ಮಠಕ್ಕೆ ಸೇರಿದರು. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಮಾರ್ಗದರ್ಶನ ಹಾಗೂ ಕೃಪಾಶೀರ್ವಾದ ಮುಂಬೆಳಕಿನಲ್ಲಿ ತಮ್ಮ ಭವಿಷ್ಯವನ್ನು ರೂಪಿಸಿಕೊಂಡು ನಂತರ ಕನ್ನಡ ಪಂಡಿತ, ಎಂ.ಎ. ಕನ್ನಡ ಸ್ನಾತಕೋತ್ತರ ಪದವಿ, ಬಿ.ಇಡಿ. ವೇದಾಂತ ವಿದ್ವತ್ ಉತ್ತಮ, ಸಂಸ್ಕೃತದಲ್ಲಿ ಸ್ನಾತಕೋತ್ತರ ಪದವಿ, ಹಿಂದಿ ರತ್ನ, ವೇದ, ಆಗಮ ಪದವಿಯನ್ನು ತಮ್ಮದಾಗಿಸಿಕೊಂಡ ಪ್ರತಿಭಾವಂತರು.

ವೃತ್ತಿಯಲ್ಲಿ ಶಿಕ್ಷಕರಾದರೂ, ಪ್ರವೃತ್ತಿಯಲ್ಲಿ ಸಾಹಿತಿಯಾಗಿ, ಕಲಾವಿದರಾಗಿ, ವಿಮರ್ಶಕರಾಗಿ, ಸಮಾಜ ಸೇವಕರಾಗಿ ಗುರುತಿಸಿಕೊಂಡಿದ್ದಾರೆ. ಶಂಭು ಪ್ರಕಾಶನವನ್ನು ಪ್ರಾರಂಭಿಸಿ ತನ್ಮೂಲಕ ಹಲವಾರು ಕನ್ನಡ ಕೃತಿಗಳನ್ನು ಪ್ರಕಟಿಸಿ ಸಾಹಿತ್ಯಾಭಿಮಾನವನ್ನು ಮೆರೆದಿದ್ದಾರೆ.

**ಪ್ರಕಟಿತ ಕೃತಿಗಳು** : ಹರಳೂರು ಮಲ್ಲಿಗೆ, ಸಿದ್ಧಗಂಗಾ ಸಿರಿಮಲ್ಲಿಗೆ, ಭುವನಭಾಗ್ಯ, ಬಣ್ಣದ ಪಾತ್ರ, ಹಾರುವ ಮುಗಿಲೆಡೆಗೆ, ಕುಮಾರ ವಚನ, ಕಲೆಯ ಕಣಜ, ಅಂಗೈಯೊಳ ಹಣತೆ, ಕನ್ನಡ





ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ರಾಜ್ಯ ಶಿಕ್ಷಕ ಪ್ರಶಸ್ತಿ ಪುರಸ್ಕೃತರಾದ ಶ್ರೀ ಹರಳೂರು ಶಿವಕುಮಾರ ರವರಿಗೆ ಶುಭ ಹಾರೈಸಿ ಅಭಿನಂದಿಸಲಾಯಿತು.


ಶ್ರೀ ಹರಳೂರು ಶಿವಕುಮಾರ ರವರಿಗೆ ರಾಜ್ಯ ಶಿಕ್ಷಕ ಪ್ರಶಸ್ತಿ ಪ್ರದಾನ

ನುಡಿಯುತಿದೆ, ಲಕಲಕ ಚಿಕ್ಕಿ, ನುಡಿಜೇನು, ಸುಭಾಷಿತ ದರ್ಶನ, ಸಮಾನತೆಯ ಹರಿಕಾರ, ಬದುಕಿನ ಸೂತ್ರಗಳು, ಬಾನಿನ ಕಡಲಲ್ಲಿ, ಬುದ್ಧ ಎಲ್ಲವ ಗೆದ್ದ, ಕುಮಾರ ವಚನ ಸೌರಭವೂ ಸೇರಿದಂತೆ ಮೂವತ್ತಕ್ಕೂ ಹೆಚ್ಚು ಕೃತಿಗಳನ್ನು ಹೊರತಂದಿದ್ದಾರೆ. ನಮ್ಮೆಲ್ಲರ ಆರಾಧ್ಯದೈವ, ನಡೆದಾಡುವ ದೇವರು, ಪದ್ಮಭೂಷಣ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತ ಬೃಹತ್ ಗ್ರಂಥ ಮುದ್ರಣದ ಹಂತದಲ್ಲಿದೆ.

**ಪ್ರಶಸ್ತಿ ಗೌರವಗಳು** : ಕರ್ನಾಟಕ ಕವಿರತ್ನ, ಅಮೋಘವರ್ಷ, ಸಾಹಿತ್ಯ ಚಿಂತಕ, ಬಸವಜ್ಯೋತಿ, ಕಾವ್ಯಶ್ರೀ ಪ್ರಶಸ್ತಿ, ಅತ್ಯುತ್ತಮ ಜಿಲ್ಲಾ ಶಿಕ್ಷಕ ಪ್ರಶಸ್ತಿ, ಕರುನಾಡ ಚೇತನ ರತ್ನ, ಶ್ರೀಗಂಧ ಕಲಾನಕ್ಷತ್ರ, ವಿಶ್ವಮಾನವ ಕುವೆಂಪು ರಾಜ್ಯೋತ್ಸವ ಪ್ರಶಸ್ತಿ, ವಿಶ್ವಜ್ಯೋತಿ ಅಂತರರಾಷ್ಟ್ರೀಯ ಪ್ರಶಸ್ತಿ, ಭಾರತರತ್ನ ಡಾ. ಎ.ಪಿ.ಜೆ. ಅಬ್ದುಲ್ ಕಲಾಂ ರಾಷ್ಟ್ರೀಯ ಪ್ರಶಸ್ತಿ, ಶಿಕ್ಷಣಶಿಲ್ಪಿ ಪ್ರಶಸ್ತಿಯು ಸೇರಿದಂತೆ ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

ಶ್ರೀ ಹರಳೂರು ಶಿವಕುಮಾರ ಅವರು ಅನೇಕ ಕಾರ್ಯಕ್ರಮಗಳು, ಬೆಂಗಳೂರು ದೂರದರ್ಶನ ಹಾಗೂ ಬೆಂಗಳೂರು ಆಕಾಶವಾಣಿಯಲ್ಲಿ ಬಿತ್ತರಗೊಂಡಿವೆ. ಪ್ರಸ್ತುತ ತುಮಕೂರು ತಾಲ್ಲೂಕು ಮಕ್ಕಳ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀಯುತರು, ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಸೇರಿದಂತೆ ಹಲವಾರು ಸಂಘ ಸಂಸ್ಥೆಗಳಲ್ಲಿ ವಿವಿಧ ಹುದ್ದೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಹಲವಾರು ಶಾಲೆಗಳಿಗೆ ಪ್ರತಿಭಾ ಪುರಸ್ಕಾರಕ್ಕೆ ಧನ ಸಹಾಯ, ಶಾಲಾ ಮಕ್ಕಳಿಗೆ ಪಾಠೋಪಕರಣ ಹಾಗೂ ಪೀಠೋಪಕರಣಗಳಿಗಾಗಿ, ಅನಾಥ ಮಕ್ಕಳ ಶಿಕ್ಷಣ ದಾಸೋಹಕ್ಕೆ ಸಹಾಯ ಮಾಡುವುದರ ಮೂಲಕ ವಿದ್ಯಾರ್ಥಿಗಳ ಭವ್ಯಭವಿಷ್ಯಕ್ಕೆ ಪ್ರೇರಕರಾಗಿದ್ದಾರೆ.

ಶ್ರೀ ಶಿವಕುಮಾರ ಅವರು ವೃತ್ತಿ ಜೀವನದಲ್ಲಿ ಮತ್ತು ಯಶಸ್ಸನ್ನು ಸಾಧಿಸಲಿ, ಮತ್ತಷ್ಟು ಕೃತಿಗಳು ಬೆಳಕು ಕಾಣುವಂತಾಗಲಿ, ಪರಮಪೂಜ್ಯ ಶ್ರೀಗಳಿರ್ವರ ಹಾಗೂ ಶ್ರೀ ಸಿದ್ಧಗಂಗಾ ಗುರುಪರಂಪರೆಯ ದಿವ್ಯಾಶೀರ್ವಾದ ಅವರ ಮೇಲಿರಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

### ಶ್ರೀವಾಣಿ

ಶಿಕ್ಷಕನನ್ನು ಲೋಕ ಸದಾ ನೋಡುತ್ತಿರುತ್ತದೆ. ಅದರಲ್ಲೂ ವಿದ್ಯಾರ್ಥಿ ಲೋಕ ನಿರಂತರ ಕಣ್ಣಿಟ್ಟಿರುತ್ತದೆ. ಅವನ ನುಡಿ-ನಡೆಗಳನ್ನು, ಚಲನವಲನಗಳನ್ನು, ಶೀಲ ವ್ಯಸನಗಳನ್ನು ಗಮನಿಸುತ್ತಿರುತ್ತದೆ. ಶಿಕ್ಷಕನ ಪಾಂಡಿತ್ಯ, ಪ್ರತಿಭೆಗಳಿಗಿಂತ ಅವನ ಬದುಕನ್ನು ತೆರೆದ ಕಣ್ಣುಗಳಿಂದ ನೋಡುತ್ತದೆ. ಶಿಕ್ಷಕನ ನಿಜವಾದ ವಿಮರ್ಶಕರು ವಿದ್ಯಾರ್ಥಿಗಳು. ಶಿಕ್ಷಕ ವಿದ್ಯಾರ್ಥಿಯ ಜೀವನದಲ್ಲಿ ಅದ್ಭುತ ಕ್ರಾಂತಿ ಮಾಡಬಲ್ಲ ಮಹಾಶಕ್ತಿ. ಮೃಗವನ್ನು ಮಾನವನನ್ನಾಗಿ ಪರಿವರ್ತಿಸುವ ಮಾಂತ್ರಿಕ.

* * *

ಇಂದು ನಮ್ಮಲ್ಲಿ ಶಿಕ್ಷಕರು ಬಹಳ ಮಂದಿ ಜ್ಞಾನದಾಹಿಗಳಾಗುತ್ತಿಲ್ಲ. ಅಧ್ಯಯನಶೀಲರಾಗಿಲ್ಲ. ಶಿಕ್ಷಕ ನೀತಿ ಸಂಪನ್ನನಾಗಿರಬೇಕು. ಚಾರಿತ್ರ್ಯಶುದ್ಧಿಯ ಒಡೆಯನಾಗಬೇಕು. ಪ್ರೀತಿ ಪ್ರೇಮಗಳ ಸತ್ಪಾತ್ರೆಯಾಗಿರಬೇಕು. ಜೂಜು, ಕುಡಿತ, ಅನೈತಿಕ ವ್ಯಸನಗಳಿಂದ ಮುಕ್ತನಾಗಿರಬೇಕು. ಏಕೆಂದರೆ ಆಚಾರ್ಯ ಸ್ಥಾನ ಪರಮಪವಿತ್ರವಾದುದು. ಇಹ-ಪರಗಳೆರಡನ್ನೂ ಶುದ್ಧಗೊಳಿಸುವ ಕಾಯಕ ಕ್ಷೇತ್ರ



ಲೇಖನ

# ಬಸವಣ್ಣನವರ ಆತ್ಮಶೋಧನೆ

– ಆರ್.ಎಸ್. ಚಾಪಗಾವಿ *

'ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ,
ಎನ್ನೊಳಗೇನೂ ಶುದ್ಧವಿಲ್ಲ ನೋಡಯ್ಯಾ
ನುಡಿಗೆ ತಕ್ಕ ನಡೆಯ ಕಂಡಡೆ
ಕೂಡಲ ಸಂಗಮದೇವನೊಳಗಿಪ್ಪನಯ್ಯಾ.'

ಈ ಜಗತ್ತಿನಲ್ಲಿ ಹಲವಾರು ಪ್ರವಾದಿ ಪುರುಷರು ಆಗಿ ಹೋಗಿದ್ದು, ನಾನು ದೇವರ ಅವತಾರ, ನಾನು ದೇವರ ಮಗ, ನಾನು ದೇವದೂತ, ದೇವರ ಪ್ರತಿನಿಧಿ, ನಾನು ನಿಮಗೆಲ್ಲ ಗುರುವಾಗಿ ಮಾರ್ಗದರ್ಶನ ಮಾಡಲು ಬಂದಿದ್ದೇನೆಂದು ಹೇಳುತ್ತ ಮಾನವ ಕಲ್ಯಾಣಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟು ಹೋಗಿದ್ದಾರೆ. ಆದರೆ ನಾನೊಬ್ಬ ಕಿಂಕರರ ಕಿಂಕರ, ಜಗದ ಜನರೆಲ್ಲ ನನಗೆ ಶಂಕರನ ಪ್ರತಿರೂಪ ಎಂದು ಹೇಳಿ ಅದರಂತೆ ಭೃತ್ಯಾಚಾರ ಭಾವದಿಂದ ನಡೆದು ಜನಸಾಮಾನ್ಯರಲ್ಲಿ ಜಗದೀಶನನ್ನು ಕಂಡು ಜಗ ಕಲ್ಯಾಣಕ್ಕೆ ಆತ್ಮ ಸಮರ್ಪಣೆ ಮಾಡಿಕೊಂಡ ಏಕೈಕ ಮಹಾಚೇತನ ಬಸವಣ್ಣನವರು ಎಂದರೆ ತಪ್ಪಾಗಲಾರದು. ಮಹಾ ಮಾನವತಾವಾದಿ ಬಸವಣ್ಣನವರು ನಮ್ಮ ದೇಶ ಕಂಡ ಒಬ್ಬ ಮಹಾನ್ ಕಾರಣಿಕ ಪುರುಷರಾಗಿದ್ದಾರೆ. ಸರ್ವ ಸಮಾನತೆಯ ಸಮೃದ್ಧ ಸುಖಿ ಸಮಾಜ ರಚನೆಯ ಗುರಿ ಇಟ್ಟುಕೊಂಡು ಅವರು ನಡೆಸಿದ ಸಮಾಜೋಧಾರ್ಮಿಕ ಆಂದೋಲನವು ವಿಶ್ವಮಾನ್ಯವಾದುದು, ಅದೊಂದು ಜನಪರ ಚಳುವಳಿಯಾಗಿತ್ತು, ಸಮಗ್ರಕ್ರಾಂತಿಯೇ ಅದರ ಆಶಯವಾಗಿತ್ತು. ಅದು ಇತಿಹಾಸದಲ್ಲಿ ನಡೆದ ಒಂದು ಅದ್ಭುತ ಪ್ರಯೋಗವಾಗಿತ್ತು. ಅಂತೆಯೇ ಸಮಕಾಲೀನ ಶರಣರಾದಿಯಾಗಿ ಇಂದಿನ ಕಂಪ್ಯೂಟರ್ ಯುಗದವರೆಗೆ ವಿದ್ವಾಂಸರು, ತತ್ತ್ವಜ್ಞಾನಿಗಳು, ಸಾಹಿತಿಗಳು, ಸಂಶೋಧಕರು ಬಸವಣ್ಣನವರನ್ನು ಯುಗಪುರುಷನೆಂದೂ ಯುಗಾವತಾರಿಯೆಂದೂ, ಯುಗಪ್ರವರ್ತಕನೆಂದೂ, ಯುಗದ ಉತ್ಸಾಹಿಯೆಂದೂ, ಯುಗದ ಅಚ್ಚರಿಯೆಂದೂ, ಜಗದ ನೆಂಟನೆಂದೂ, ಕಾರಣಿಕ ಪುರುಷನೆಂದೂ, ವಿಶ್ವಗುರುವೆಂದೂ ತಮತಮಗೆ ಹೊಳೆದ ರೀತಿಯಲ್ಲಿ ಕೊಂಡಾಡಿರುವುದನ್ನು ಕಾಣುತ್ತೇವೆ. ವಿದ್ವಾಂಸರ ಅಭಿಪ್ರಾಯಗಳೇನೇ ಇರಲಿ ಬಸವಣ್ಣನವರಂತೆ ಆತ್ಮನಿರೀಕ್ಷಣೆ, ಆತ್ಮಶೋಧನ, ಆತ್ಮಾವಲೋಕನ, ಆತ್ಮವಿಮರ್ಶೆ, ಆತ್ಮನಿವೇದನೆ ಮಾಡಿಕೊಂಡ ಇನ್ನೊಬ್ಬ ಪ್ರವಾದಿಯಾಗಲಿ, ತತ್ತ್ವಜ್ಞಾನಿಯಾಗಲಿ, ವಿದ್ವಾಂಸನಾಗಲಿ, ವಿಜ್ಞಾನಿಯಾಗಲಿ ಇಲ್ಲವೆಂದೇ ಹೇಳಬಹುದು. ರಾಷ್ಟ್ರಕವಿ ಡಾ. ಜಿ.ಎಸ್. ಶಿವರುದ್ರಪ್ಪನವರು ಬಸವಣ್ಣನವರ ಬಗ್ಗೆ ತಮ್ಮ ಅನಿಸಿಕೆಯನ್ನು ಹೀಗೆ ವ್ಯಕ್ತಮಾಡಿದ್ದಾರೆ.



**'ಇರಬಹುದು ನಿನಗಿಂತ ದೊಡ್ಡವರು ಅನುಭಾವದಲ್ಲಿ ತ್ಯಾಗದಲ್ಲಿ ಯೋಗದಲ್ಲಿ, ಇರಲಾರರೆಂದೇ ತೋರುತಿದೆ ನಿನ್ನಂತೆ ನಿನ್ನೊಳಗಿನ ಅಂಕುಡೊಂಕುಗಳನ್ನು ಕಂಡವರು, ಮುಚ್ಚುಮರೆಯಿಲ್ಲದೆ ಒಗೆದು ಮಡಿ ಮಾಡಿ ಬಿಚ್ಚಿಟ್ಟು ಇಷ್ಟದೈವದ ಗುಡಿಗೆ ಮಡಿಯಾಗಿ ಹಾಸಿದವರು'**

ಕವಿ ಡಾ. ಶಿವರುದ್ರಪ್ಪನವರು ಹೇಳಿದಂತೆ ಬಸವಣ್ಣನವರು ಯಾವುದೇ ಮುಚ್ಚುಮರೆಯಿಲ್ಲದೆ ಅತ್ಯಂತ ಪ್ರಾಂಜಲ ಮನಸ್ಸಿನಿಂದ ವಿನೀತ ಭಾವದಿಂದ ತನ್ನ ಒಳಗು ಹೊರಗುಗಳನ್ನು

---

* ೬೪೪, ರಾಮತೀರ್ಥನಗರ, ಬೆಳಗಾವಿ-೫೯೦೦೧೬





ಬಗಿದಿಟ್ಟದ್ದನ್ನು ಕಾಣುತ್ತೇವೆ. ಅವರು ಆತ್ಮಶೋಧನೆ ಮಾಡಿಕೊಂಡ ಪರಿ ಅದ್ಭುತವಾಗಿತ್ತು. ಆತ್ಮ ನಿವೇದನೆ ಮಾಡಿಕೊಂಡ ರೀತಿ ಅನುಪಮವಾಗಿತ್ತು. ಆತ್ಮವಂಚನೆ ಇಲ್ಲದೆ ಆತ್ಮಶೋಧನೆಯ ಪ್ರಕ್ರಿಯೆಯಲ್ಲಿ ಮೂಡಿ ಬಂದ ಅವರ ನೂರಾರು ವಚನಗಳು ಆತ್ಮಸಾಕ್ಷಿಯ ನುಡಿಗಳಾಗಿದ್ದು ಆತ್ಮಶುದ್ಧಿಯ ಜಲಬಿಂದುಗಳಾಗಿವೆ, ಆತ್ಮ ವಿಮರ್ಶೆಯ ಝುರಿಗಳಾಗಿವೆ, ಆತ್ಮ ಸಮರ್ಪಣೆಯ ಹೊನಲುಗಳಾಗಿವೆ.

'ಭವಬಂಧನ ಭವಪಾಶವಾದ ಕಾರಣವೇನಯ್ಯಾ?
ಹಿಂದಣ ಜನ್ಮದಲ್ಲಿ ಲಿಂಗವ ಮರೆದೆನಾಗಿ
ಹಿಂದಣ ಸಿರಿಯಲ್ಲಿ ಜಂಗಮವ ಜರಿದೆನಾಗಿ....'

'ಸಂಸಾರ ಸಾಗರ ಉರದುದ್ದವೆ ಹೇಳಾ !
ಸಂಸಾರ ಸಾಗರ ಕೊರಳುದ್ದವೆ ಹೇಳಾ !
ಸಂಸಾರ ಸಾಗರ ಶಿರದುದ್ದವಾದ ಬಳಿಕ ಏನ
ಹೇಳುವೆನಯ್ಯಾ?
ಅಯ್ಯಾ ಅಯ್ಯಾ ಎನ್ನ ಹುಯ್ಯಲ ಕೇಳಯ್ಯಾ....'

'ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯಾ
ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು,
ಇನ್ನೆಂದಿಗೆ ಮೋಕ್ಷವಹುದೊ ಕೂಡಲಸಂಗಮದೇವಾ'

'ಇಲಿಗಡಹನೊಡ್ಡಿದಲ್ಲಿ ಇಪ್ಪಂತೆ ನನ್ನ ಸಂಸಾರ....
ಅಕಟಕಟಾ ಸಂಸಾರಕ್ಕೆ ಆಸತ್ತೆ ಕೂಡಲಸಂಗಮದೇವಾ'

ಹೀಗೆ ಪರಿಪರಿಯಾಗಿ ಬಸವಣ್ಣನವರು ಆತ್ಮನಿರೀಕ್ಷಣೆ ಮಾಡಿಕೊಳ್ಳುತ್ತಾರೆ. ಈ ಭವ ಬಂಧನದಲ್ಲಿ, ಭವ ಪಾಶದಲ್ಲಿ ಬಂಧಿತನಾದ ಕಾರಣವೇನು ? ಹಿಂದಿನ ಜನ್ಮದಲ್ಲಿ ಗುರು ಲಿಂಗ ಜಂಗಮವ ಮರೆದ ಕಾರಣ ನನಗೀ ಬಂಧನವಾಯಿತು. ಪಂಚೇಂದ್ರಿಯಗಳ ಲೋಕ ವ್ಯವಹಾರಗಳ ಸಂಸಾರವೆಂಬ ಈ ಮಹಾ ಸಾಗರದಲ್ಲಿ ಮುಳುಗಿದ ಬಳಿಕ ನಾನೇನು ಮಾಡಲು ಸಾಧ್ಯವಯ್ಯಾ ? ಅಯ್ಯಾ ಕೂಡಲ ಸಂಗಮದೇವಾ ನನ್ನ ಮೊರೆ ಕೇಳಯ್ಯಾ, ಸಂಸಾರವೆಂಬ ರಾಹು ನನ್ನನ್ನು ನುಂಗಿ ಹಾಕಿದೆ. ಈ ದೇಹಕ್ಕೆ ಗ್ರಹಣ ಹಿಡಿದಿದೆ. ಇಲಿಯು ಬಲೆಯಲ್ಲಿ ಸಿಕ್ಕಿಹಾಕಿಕೊಂಡಂತೆ ಎನ್ನ ಸ್ಥಿತಿಯಾಗಿದೆ. ಈ ಸಂಸಾರದ ಜಂಜಡದಲ್ಲಿ ಸಿಲುಕಿ ಆಸತ್ತು ಬೇಸತ್ತಿರುವೆ. ಇದಕ್ಕೆ ಬಿಡುಗಡೆ ಎಂದಿಗೆ ಹೇಳಾ ಕೂಡಲಸಂಗಮದೇವಾ ಎಂದು ಸೆರಗೊಡ್ಡಿ ಬೇಡಿಕೊಳ್ಳುತ್ತಾರೆ.

'ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ
ಕಾಯಯ್ಯಾ ಕಾಯಯ್ಯಾ'
'ಆಸೆಯೆಂಬ ಪಾಶದಲ್ಲಿ ಭವಬಂಧನವಾಗಿರ್ದೆನಯ್ಯಾ....'
'ಇಂದಿಂಗೆಂತು ನಾಳಿಂಗೆಂತು ಎಂದು ಬೆಂದ ಒಡಲ
ಹೊರೆಯ ಹೋಯಿತ್ತಯ್ಯಾ....'
'ಕಪ್ಪೆ ಸರ್ಪನ ನೆಳಲಲ್ಲಿಪ್ಪಂತೆ ಎನಗಾಯಿತ್ತಯ್ಯಾ....'
'ನಾನಾ ವರ್ಣದ ಸಂಸಾರದ ಹಾವು ಹಾವಾಡಿಗನ
ಸ್ನೇಹದಂತಾಯಿತ್ತಯ್ಯಾ....'
ಸಂಸಾರವೆಂಬ ಸರ್ಪಮುಟ್ಟಲು ಪಂಚೇಂದ್ರಿಯ ವಿಷಯವೆಂಬ
ವಿಷದಿಂದ ಆನು ಮುಂದುಗೆಟ್ಟೆನಯ್ಯಾ

ಸರ್ಪದ ನೆರಳಲ್ಲಿದ್ದ ಕಪ್ಪೆಯಂತೆ, ಹಾವು ಹಾವಾಡಿಗನ ಸ್ನೇಹದಂತೆ, ಸಂಸಾರವೆಂಬ ಬಲೆಯಲ್ಲಿ ಬಿದ್ದು ಒದ್ದಾಡುತ್ತ ಇಂದಿಂಗೆಂತು ನಾಳಿಂಗೆಂತು ಎಂದು ಬೆಂದ ಒಡಲ ಹೊರೆಯುವದರಲ್ಲಿಯೇ ನಾನು ಸೋತು ಸುಣ್ಣವಾಗಿ ಹೋಗಿದ್ದೇನೆ. ಸಂಸಾರವೆಂಬ ಸರ್ಪ ಕಚ್ಚಿ ಪಂಚೇಂದ್ರಿಯಗಳೆಂಬ ವಿಷಪ್ರಾಶನದಿಂದ ನಾನು ಕಂಗೆಟ್ಟು ಕಳವಳಿಸಿ ಹೋಗಿದ್ದೇನೆ. ಈ ಸಂಸಾರದ ತೊಡಕು ಕಳಚುವ ಬಗೆ ಹೇಗೆ ಹೇಳಾ ಎಂದು ಆರ್ತಭಾವದಿಂದ ಬಸವಣ್ಣನವರು ಪ್ರಾರ್ಥಿಸುತ್ತಾರೆ.

'ಕೆಸರಲ್ಲಿ ಬಿದ್ದ ಪಶುವಿನಂತೆ
ಆನು ದೆಸೆದೆಸೆಗೆ ಬಾಯಿ ಬಿಡುತ್ತಿದ್ದೇನೆ....'
'ಬಡ ಪಶು ಪಂಕದಲ್ಲಿ ಬಿದ್ದಡೆ
ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೆ?'
'ಅಡವಿಯೊಳಗೆ ಹೊಲಬುಗೆಟ್ಟ
ಪಶುವಿನಂತೆ ಅಂಬೆ ಅಂಬೆ ಎಂದು ಕರೆವುತ್ತಲಿದ್ದೇನೆ....'

ಕೆಸರಿನಲ್ಲಿ ಸಿಕ್ಕಿಹಾಕಿಕೊಂಡ ಪಶುವಿನಂತೆ, ಗೊಂಡಾರಣ್ಯದಲ್ಲಿ ತಪ್ಪಿಸಿಕೊಂಡ ಮೃಗದಂತೆ ದಾರಿ ಕಾಣದೆ ಧಾವತಿಗೊಂಡು ದಡಬಡಿಸುತ್ತಿದ್ದೇನಯ್ಯಾ. ಸ್ವಾತಿ ಮಳೆ ಹನಿಗಾಗಿ ಕಾತರಿಸುತ್ತಿರುವ ಸಮುದ್ರದ ಸಿಂಪಿನಂತೆ, ಹಿಂಡನಗಲಿ ಹಿಡಿವಡೆದ ಕುಂಜರನಂತೆ, ತಾಯಿಯನ್ನು ಕಳೆದುಕೊಂಡು ಕಳವಳಿಸುತ್ತಿರುವ ಕಂದಮ್ಮನಂತೆ ಅಳುತ್ತಿದ್ದೇನಯ್ಯಾ, ಯಾವಾಗ ನೀ ಬಂದು ಕೈ ಹಿಡಿದು ಎತ್ತಿಕೊಳ್ಳುವೆ ಎಂದು ಹಾತೊರೆದು ಹಂಬಲಿಸುತ್ತಿದ್ದೇನಯ್ಯಾ ಎಂದು ಅಂಜಲಿಬದ್ಧವಾಗಿ ಕೂಡಲ ಸಂಗಮದೇವನನ್ನು ಯಾಚಿಸುತ್ತಾರೆ. ಈ ಹಂತದಲ್ಲಿ ಮೂಡಿ ಬಂದ ಬಸವಣ್ಣನವರ ಆತ್ಮನಿವೇದನೆಯ ವಚನಗಳು ಉಪಮೆ ಪ್ರತಿಮೆಗಳಿಂದ ರೂಪಕಗಳಿಂದ ಕೂಡಿದ್ದು ಮನ ಮಿಡಿಯುವಂತಿವೆ.





'ಆಸತ್ತೆ ಅಲಸಿದೆನೆಂದಡೆ ಮಾಣದು,
ಬೇಸತ್ತೆ ಬೆಂಬಿದ್ದೆನೆಂದಡೆ ಮಾಣದು...
ಕೂಡಲಸಂಗನ ಶರಣರು ಬಂದು
ಹೋ ಹೋ ಅಂಜದಿರೆಂದಡಾನು ಬದುಕುವೆನು'

ಆಸತ್ತು ತಳಮಳಿಸಿದರೂ, ಬೇಸತ್ತು ಬಸವಳಿದರೂ ಆಗದು, ಕಂಗೆಟ್ಟು ಕಳವಳಿಸಿದರೂ ಆಗದು. ಕೂಡಲಸಂಗನ ಶರಣರು ಬಂದು ಧೈರ್ಯ ಹೇಳಿದರೆ ಮಾತ್ರ ಬದುಕುವೆನೆನ್ನುತ್ತಾರೆ.

'ಅರಿಯದೆ ಜನನಿಯ ಜಠರದಲ್ಲಿ
ಬಾರದ ಭವಂಗಳಲ್ಲಿ ಬರಿಸಿದೆ ತಂದೆ,
ಹುಟ್ಟಿತ್ತೆ ತಪ್ಪಾಯಿತ್ತೆ, ಎಲೆ ಲಿಂಗವೆ ?
ಮುನ್ನಹುಟ್ಟಿದುದಕ್ಕೆ ಕೃಪೆಯ ಮಾಡು ಲಿಂಗವೆ!
ಇನ್ನು ಹುಟ್ಟಿದಡೆ ಕೂಡಲಸಂಗಮದೇವಾ'

ಅರಿಯದೆ ಬಾರದ ಭವಂಗಳಲ್ಲಿ ಬಂದಿರುವೆ ತಪ್ಪಾಯಿತು. ಇನ್ನು ಹುಟ್ಟಿದರೆ ನಿಮ್ಮಾಣೆ ! ಎಂದು ದೃಢವಾಗಿ ಆತ್ಮವಿಶ್ವಾಸದಿಂದ ಹೇಳುತ್ತಾರೆ.

ಬಸವಣ್ಣನವರು ಆತ್ಮಾವಲೋಕನ ಮಾಡಿಕೊಂಡ ಪರಿ ಅನನ್ಯವಾದುದು. ಪ್ರಾಸ ಲಯ ರೂಪಕಗಳಿಂದ ಅಲಂಕೃತವಾದ ಅವರ ಆತ್ಮಾವಲೋಕನದ ವಚನಗಳು ಹಲವಾರು. ಅವುಗಳನ್ನು ಓದಿಯೇ ಆನಂದಿಸಬೇಕು.

'ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ'
'ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ,
ಎನ್ನೊಳಗೇನೂ ಶುದ್ಧವಿಲ್ಲಯ್ಯಾ'
'ಕೊಂಬೆಯ ಮೇಲಿನ ಮರ್ಕಟನಂತೆ ಲಂಘಿಸೂದೆನ್ನ ಮನವು'
'ಮರನನೇರಿದ ಮರ್ಕಟನಂತೆ ಹಲವು ಕೊಂಬೆಗೆ
ಹಾಯುತ್ತಲಿದ್ದೇನೆ'
'ಅಂದಣವನೇರಿದ ಸೊಣಗನಂತೆ ನನ್ನ ಸ್ವಭಾವ'
'ತುಪ್ಪದ ಸವಿಗೆ ಅಲಗ ನೆಕ್ಕುವ ಶುನಕನಂತೆ ನನ್ನ ಬಾಳುವೆ'
'ಒಂದು ಮೊಲಕ್ಕೆ ನಾನೊಂಬತ್ತು ಬಿಟ್ಟಂತೆ ನನ್ನ ಕಾಯ ವಿಕಾರ'
ವಿಕಳನಾದೆನು ಪಂಚೇಂದ್ರಿಯ ಸಪ್ತಧಾತುವಿನಿಂದ, ಮತಿಗೆಟ್ಟೆನು
ಮನದ ವಿಕಾರದಿಂದ, ಧೃತಿಗೆಟ್ಟೆನು ಕಾಯ ವಿಕಾರದಿಂದ'

ಹೀಗೆ ಹಲವಾರು ವಚನಗಳಲ್ಲಿ ಬಸವಣ್ಣನವರ ಆತ್ಮಸಾಕ್ಷಿ ಪ್ರಜ್ಞೆ ಓತಪ್ರೋತವಾಗಿ ಹರಿದು ಬಂದಿರುವುದನ್ನು ಕಾಣುತ್ತೇವೆ.

'ಅಯ್ಯಾ, ಅಯ್ಯಾ, ಎಂದು ಕರೆವುತ್ತಲಿದ್ದೇನೆ'
'ನೀ ಹುಟ್ಟಿಸಿದಲ್ಲಿ ಹುಟ್ಟಿನೀ ಕೊಂದಲ್ಲಿ ಸಾಯದೆ,
ಎನ್ನ ವಶವೆ ಅಯ್ಯಾ'....

'ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ... ಸಲಹು
ಕೂಡಲಸಂಗಮದೇವಾ

ಅಯ್ಯಾ ಅಯ್ಯಾ ಎಂದು ಒಂದೇ ಸವನೆ ಒದರಿದರೂ ನೀ ಏಕೆ ಮೌನಿಯಾಗಿರುವೆ ? ನೀ ಹುಟ್ಟಿಸಿದಲ್ಲಿ ಹುಟ್ಟಿ ನೀ ಕೊಂದಲ್ಲಿ ಸಾಯದೆ ಎನಗೆ ಬೇರೆ ಗತಿಯುಂಟೆ ? ಎಲೆ ಅಯ್ಯಾ ಈ ಸಂಸಾರ ಘೋರಾರಣ್ಯದಲ್ಲಿ ನನ್ನನೊಂದು ಹುಲುಗಿಳಿಯ ಮಾಡಿ ಭಕ್ತಿಯೆಂಬ ಪಂಜರದಲ್ಲಿಟ್ಟು ಸಲಹು ಎಂದು ಭೃತ್ಯ ಭಾವದಿಂದ ಬೇಡಿಕೊಳ್ಳುತ್ತಾರೆ.

'ತಂದೆ ನೀನು ತಾಯಿ ನೀನು, ಬಂಧು ನೀನು ಬಳಗ ನೀನು'
'ಎನ್ನ ವಾಮಕ್ಷೇಮ ನಿಮ್ಮದಯ್ಯಾ,
ಎನ್ನ ಹಾನಿ ವೃದ್ಧಿ ನಿಮ್ಮದಯ್ಯಾ
'ಎನಗೆ ನಿಮ್ಮ ನೆನಹಾದಾಗಲೆ ಉದಯ, ನಿಮ್ಮ
ಮರಹಾದಾಗಲೆ ಅಸ್ತಮಾನ'....
'ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ....'

ನನಗೆ ತಂದೆ ತಾಯಿ ಬಂಧು ಬಳಗ ಎಲ್ಲ ನೀನೇ, ನೀನೇ ನನ್ನ ಸರ್ವಸ್ವ, ಎನ್ನ ಹಾನಿ ವೃದ್ಧಿ, ಒಳಿತು ಕೆಡಕು, ನನ್ನ ಮಾನಾಪಮಾನ ಎಲ್ಲ ನಿನ್ನನ್ನೇ ಕೂಡಿದೆ. ಬಳ್ಳಿಗೆ ಕಾಯಿ ಭಾರವೆ? ನಿನಗೆ ನಾನು ಭಾರವೆ? ನಿಮ್ಮ ನೆನಹಾದಾಗಲೆ ನನಗೆ ಉದಯ, ನಿಮ್ಮ ಮರಹಾದಾಗ ನನಗೆ ಅಸ್ತಮಾನ ನೋಡಯ್ಯಾ, ಸದಾಕಾಲ ನಿನ್ನನ್ನೇ ನೆನೆಯುವಂತೆ ಮಾಡು. ಬಾಗಿದ ತಲೆ ಮುಗಿದ ಕೈಯಾಗಿರಿಸು, ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳೆಸದಂತೆ ನನ್ನನ್ನು ಹದ್ದುಬಸ್ತಿನಲ್ಲಿಡು. ನನ್ನ ಕರಣೇಂದ್ರಿಯಗಳನ್ನು ನಿಶ್ಚೇತನಗೊಳಿಸು ಎಂದು ಸಂಪೂರ್ಣ ಶರಣಾಗತಿ ಭಾವದಿಂದ ನತಮಸ್ತಕರಾಗಿ ಬೇಡಿಕೊಳ್ಳುತ್ತಾರೆ.

'ಅಕಟಕಟಾ ನಿನಗಿನಿತು ಕೃಪೆಯಿಲ್ಲ....
ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ? ಪರ
ಲೋಕದೂರನ....'
ಎಂದು ಬಸವಣ್ಣನವರು ವ್ಯಾಕುಲಭರಿತರಾಗಿ ದೇವರಿಗೆ ಮೊರೆಯಿಡುತ್ತಾರೆ.

'ನೀನೊಲಿದರೆ ಕೊರಡು ಕೊನರುವದಯ್ಯಾ, ಬರಡು
ಹಯನಹುದಯ್ಯಾ
ನೀನೊಲಿದರೆ ಸಕಲ ಇಷ್ಟಾರ್ಥಗಳು ಸಾಧ್ಯವಪ್ಪುವು,
ಕೃಪೆದೋರಯ್ಯ ಎಂದು ಪ್ರಾರ್ಥಿಸುತ್ತಾರೆ.
'ಅಂಕವೊಡಿದಡೆ ತೆತ್ತಿಗಂಗೆ ಭಂಗವಯ್ಯಾ,
ಕಾದಿ ಗೆಲಿಸಯ್ಯಾ ಎನ್ನನು,

ಕಾಳಗದಲ್ಲಿ ಸೈನಿಕ ಹೆದರಿ ಹಿಮ್ಮೆಟ್ಟಿದರೆ ಅದು ಅರಸನಿಗೆ ಅಪಚಾರ. ಹಾಗೆ ಈ ಭವಸಾಗರದ ಹೋರಾಟದಲ್ಲಿ ನಾನು ಸೋತು ಪಲಾಯನ ಗೈದರೆ ಅದು ನಿನಗೆ ಅಪಚಾರ. ಆದ್ದರಿಂದ ಕಾದಿ ಗೆಲ್ಲಿಸಯ್ಯಾ ಎನ್ನನು, ಗೆಲ್ಲುವ ಛಲವು ಎನ್ನಲ್ಲಿ ತುಂಬಯ್ಯಾ, ಎಂದು ವಿನೀತ ಭಾವದಿಂದ ಪ್ರಾರ್ಥಿಸುತ್ತಾರೆ. ಬಸವಣ್ಣನವರ ವಚನಗಳಲ್ಲಿ ಆತ್ಮ ಸಮರ್ಪಣಾ ಭಾವ ಭಂಡಾರವೇ ತುಂಬಿರುವದು.

**'ಎನ್ನ ತಪ್ಪು ಅನಂತ ಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ'**
**'ಆಸೆ ಇಚ್ಛೆಗೆನ್ನಗಾಸಿ ಮಾಡದಿರಯ್ಯಾ, ದಾಸೋಹಿಯಾಗಿರ್ಪ ದಾಸನಾಗಿರಿಸಯ್ಯಾ'**
**'ಎನಗೆ ನಾನೇ ಹಗೆ ನೋಡಯ್ಯಾ, ಎನಗೆ ನಾನೇ ಕೆಳೆ ನೋಡಯ್ಯಾ,**
**ಬಾಗಿದ ತಲೆ ಮುಗಿದ ಕೈಯಾಗಿರಿಸು, ಕೂಡಲಸಂಗಮದೇವಾ'**
**'ಎನ್ನ ಭಕ್ತನೆಂದೆಂಬರು ವಂಚನೆಯುಳ್ಳ ಡಂಭಕ ನಾನು'**
**'ಆನು ಭಕ್ತನಲ್ಲ, ನೀವು ಮಾಡಿದ ಸೂತ್ರದ ಬೊಂಬೆ ನಾನಯ್ಯಾ'**
**'ಆನೆತ್ತ ಬಲ್ಲೆನಯ್ಯಾ ನಿಮ್ಮ ಭಕ್ತಿಯ ಘನವ?'**
**'ನಾನು ಭಕ್ತನಲ್ಲಯ್ಯಾ, ಕಪಟ ವೇಷದ ಡಂಭಕ ನಾನು'**
**'ಎನ್ನ ಭಕ್ತಿ ಎಲವದ ಕಾಯಫಲದಂತೆ ನೋಡಯ್ಯಾ'**
**'ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತಯ್ಯಾ ಎನ್ನ ಭಕ್ತಿ'**
**'ಎನ್ನಲ್ಲಿ ಭಕ್ತಿ ಸಾಸವೆಯ ಷಡ್ಭಾಗದನಿತಿಲ್ಲ'**
**'ಮಾವಿನ ಕಾಯಿಯೊಳಗೆ ಒಂದು ಎಕ್ಕೆಯ ಕಾಯಿ ನಾನಯ್ಯಾ'**
**'ಲಿಂಗವ ತೋರಿ ಉದರವ ಹೊರೆವ ಭಂಗಗಾರ ನಾನು'**
**'ಭಕ್ತಿಯಿಲ್ಲದ ಬಡವ ನಾನಯ್ಯ' ಎಲ್ಲ ಪುರಾತರು ನೆರೆದು ಭಕ್ತಿಭಿಕ್ಷವನಿಕ್ಕಿದಡೆ**
**ಎನ್ನ ಪಾತ್ರ ತುಂಬಿತ್ತು ಕೂಡಲ ಸಂಗಮದೇವಾ.'**

ನೀವು ಮಾಡಿದ ಸೂತ್ರದ ಗೊಂಬೆ ನಾನು. ನಿಮ್ಮ ಭಕ್ತಿಯ ಘನವ ನಾನೇನು ಬಲ್ಲೆನು? ನಾನು ಭಕ್ತನಲ್ಲ, ಯುಕ್ತನಲ್ಲ, ಕಪಟ ವೇಷದ ಡಂಭಕ ನಾನು, ಲಿಂಗವ ತೋರಿ ಅಂಗವ ಹೊರೆವ ಭಂಗಗಾರ ನಾನು, ಮಾವಿನ ಕಾಯಿಯಲ್ಲೊಂದು ಎಕ್ಕೆ ಕಾಯಿ ನಾನು, ನನ್ನ ಭಕ್ತಿ ಎಲವದ ಕಾಯ ಫಲದಂತೆ, ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತೆ, ಎನ್ನಲ್ಲಿ ಭಕ್ತಿ ಸಾಸಿವೆಯ ಷಡ್ಭಾಗದನಿತಿಲ್ಲ. ಭಕ್ತಿ ಇಲ್ಲದ ಬಡವ ನಾನು, ಚೆನ್ನಯ್ಯ, ಕಕ್ಕಯ್ಯ, ದಾಸಯ್ಯ ಮೊದಲಾದ ಪುರಾತರು ನೆರೆದು ಭಕ್ತಿ ಭಿಕ್ಷೆಯ ನೀಡಲು ನನ್ನ ಪಾತ್ರ ತುಂಬಿತ್ತು. ಎನ್ನ ತಪ್ಪು ಅನಂತ ಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ. ದಾಸೋಹಿಯಾಗಿರ್ಪ ದಾಸನಾಗಿರಿಸೆನ್ನನು, ಬಾಗಿದ ತಲೆ ಮುಗಿದ ಕೈಯಾಗಿರಿಸು, ಎಂದು ಕಿಂಕರರ ಕಿಂಕರರಾಗಿ ಆರ್ತಭಾವದಿಂದ ಆತ್ಮಾವಲೋಕ ಮಾಡಿಕೊಳ್ಳುವುದು ಬಸವಣ್ಣನವರಿಗೆ ಮಾತ್ರ ಸಾಧ್ಯವೆನ್ನಬಹುದು.

**'ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ**
**ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ,**
**ನಿಮ್ಮ ಶರಣರ ಪಾದಕ್ಕೆ**
**ತೊಡಿಗೆಯ ಮಾಡಿ ಸಲಹು ಕೂಡಲಸಂಗಮದೇವಾ.'**

ನನ್ನನೊಂದು ಕುಲುಮೆಯಲ್ಲಿ ಕರಗಿಸಿ ಹಿಗ್ಗಾ ಮುಗ್ಗಾ ಬಡಿದು ಪುಟಕ್ಕಿಟ್ಟು ಒರೆಗೆ ಹಚ್ಚಿ ದೋಷಗಳನ್ನೆಲ್ಲ ಕಳೆದು ಶುದ್ಧ ಚಿನ್ನವಾಗಿಸಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯಾಗಿಸು, ಎಂದು ಬಿಚ್ಚು ಮನಸ್ಸಿನಿಂದ ಬೇಡಿಕೊಳ್ಳುತ್ತಾರೆ.

**'ತನು ನಿಮ್ಮದೆಂದ ಬಳಿಕ ಎನಗೆ ಬೇರೆ ತನುವಿಲ್ಲ'**
**'ಎನ್ನ ತನು ಮನ ಧನಕ್ಕೆ ನೀನೊಡೆಯ'**
**'ಎನ್ನ ಅಂತರಂಗ ನೀವಯ್ಯಾ ಎನ್ನ ಗತಿಮತಿ ನೀವೇ ಕಂಡಯ್ಯಾ'**

**'ಎನ್ನವರೊಲಿದು ಹೊನ್ನಶೂಲದಲಿಕ್ಕಿದರಯ್ಯಾ**
**ಎನ್ನ ಹೊಗಳಿ ಹೊಗಳಿ**
**...ಅಯ್ಯಾ ನೊಂದೆನು, ಸೈರಿಸಲಾರೆನು,**
**ಕೂಡಲ ಸಂಗಮದೇವಾ**
**ನೀನೆನಗೊಳ್ಳಿದನಾದಡೆ ಎನ್ನ ಹೊಗಳತೆಗಡ್ಡ ಬಾರಾ ಧರ್ಮೀ!'**

ಶರಣರು ಬಸವಣ್ಣನವರನ್ನು ಭಕ್ತಿಭಂಡಾರಿ, ಸಮಯಾಚಾರಿ, ನಮಗೆಲ್ಲಗುರು, ಜಗವೆಲ್ಲಕ್ಕೆಯೂ ಗುರು ಎಂದು ಕರೆಯಲು ಮನನೊಂದು ಹೀಗೆ ತಮ್ಮ ಅಳಲನ್ನು ತೋಡಿಕೊಂಡಿದ್ದಾರೆ. ಬಸವಣ್ಣನವರಂತೆ ಆತ್ಮನಿರೀಕ್ಷಣೆ, ಆತ್ಮಶೋಧನೆ, ಆತ್ಮನಿವೇದನೆ, ಆತ್ಮವಿಮರ್ಶೆ, ಆತ್ಮಸಮರ್ಪಣೆ ಮಾಡಿಕೊಂಡ ಇನ್ನೊಬ್ಬ ಮಹಾತ್ಮ ಈ ಜಗತ್ತಿನಲ್ಲಿ ಇಲ್ಲವೆಂದೇ ಕಾಣುತ್ತದೆ. ಆತ್ಮ ನಿವೇದನೆಯ ಅವರ ವಚನಗಳು ಅತ್ಯಂತ ಮೌಲಿಕವಾಗಿರುವವು. ಉಪಮೆ ಪ್ರತಿಮೆಗಳಿಂದ ಕೂಡಿದ್ದು ಸರಳ ಸುಂದರ ಪ್ರಾಸ ಲಯಬದ್ಧವಾಗಿದ್ದು ಕನ್ನಡದ ಸಾಹಿತ್ಯಿಕ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದು ಅನುಭಾವದ ಅಮೃತವನ್ನು ಸೂಸಿರುವುದನ್ನು ಕಾಣುತ್ತೇವೆ.



ಲೇಖನ

# ಈ ಭೂಮಿ ಸ್ವರ್ಗವಾಗಬೇಕು !

– ವಿದ್ವಾನ್ ಜಗದೀಶ್ *

ಈ ಜಗತ್ತಿನಲ್ಲಿ ಜೀವರಾಶಿಗಳೆಲ್ಲವೂ ಒಂದು ದಿನ ಕಾಲನ ಬಲೆಗೆ ಸಿಲುಕಲೇಬೇಕು. ಇದನ್ನು ಮನುಷ್ಯನಾದವನು ಅರ್ಥಮಾಡಿಕೊಳ್ಳಬೇಕು. ಈ ಜಗತ್ತಿನ ಜೀವರಾಶಿಗಳಲ್ಲಿ ಮನುಷ್ಯನಿಗೆ ಪರಮಾತ್ಮನು ಹೆಚ್ಚು ಬುದ್ಧಿಶಕ್ತಿಯನ್ನು, ಜ್ಞಾನವನ್ನು ಕೊಟ್ಟಿದ್ದಾನೆ.

ಈ ಪ್ರಪಂಚದಲ್ಲಿ ದಾರ್ಶನಿಕರು ವಾಙ್ಮಯಕಾರರು, ವ್ಯಾಖ್ಯಾನಕಾರರು, ಉಪನಿಷತ್‌ಗಳು, ವೇದಗಳು ಇವುಗಳನ್ನು ರಚಿಸಿದ ಋಷಿಗಳು, ಅಪೌರುಷೇಯಾ ಮಾತುಗಳನ್ನಾಗಲಿ, ಪುರಾಣವಾಗಲಿ, ವಚನಗಳನ್ನು ರಚಿಸಿದ ಶರಣರು, ಅನೇಕ ಸಂತರು, ದಾಸರು, ಅನುಭಾವಿಗಳು, ಈ ದೇಶದ ಋಷಿಗಳು ಅನುಭಾವಾಮೃತಗಳನ್ನು ಈ ನೆಲದ ಮೇಲೆ ಬಿಟ್ಟು ಹೋಗಿದ್ದು ಏಕೆ? ಏತಕ್ಕೋಸ್ಕರ ರಚನೆ ಮಾಡಿದರು. ಹೆಸರಿಗಾಗಿ ಬರೆದರೆ, ಪ್ರಸಿದ್ಧಿಗಾಗಿ ಬರೆದರೆ ಅಥವಾ ಪ್ರತಿಷ್ಠೆಗಾಗಿ ಬರೆದರ, ಕೀರ್ತಿಯನ್ನು ಪಡೆಯಬೇಕೆಂಬ ಆಸೆಗಾಗಿ ಬರೆದರೆ. ಇವುಗಳನ್ನು ಏತಕ್ಕೋಸ್ಕರ ರಚನೆ ಮಾಡಿ ಈ ಮನುಕುಲಕ್ಕೆ ಏಕೆ ಬಿಟ್ಟುಹೋದರು? ಚಿಂತನೆ ಮಾಡಬೇಕು.

ಈ ಎಲ್ಲ ದಾರ್ಶನಿಕರು, ಶರಣರು, ಸಂತರು, ದಾಸರು, ಅನುಭಾವಿಗಳು ಇವರ ಅನುಭವದ ವಚನಾಮೃತಗಳೆಲ್ಲವು ಹೆಸರಿಗಾಗಿ ಬರೆದಿದ್ದಲ್ಲ. ಈ ಮಾನವರನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗಬೇಕೆಂದು ಬರೆದಿದ್ದಲ್ಲ. ಬದಲಾಗಿ ಮನುಷ್ಯರು ಬದುಕಿರುವ ಈ ಭೂಮಿಯನ್ನು ಸ್ವರ್ಗವನ್ನಾಗಿ ಮಾಡಬೇಕೆಂದು ಈ ಮಹಾತ್ಮರುಗಳ ಆಶಯವಾಗಿತ್ತು. ಈ ಮನುಷ್ಯ ಬದುಕುವ ಭೂಮಿ ಸ್ವರ್ಗ ಆಗಬೇಕೆಂದು ಇವರ ಪರಿಕಲ್ಪನೆ ಆಗಿತ್ತು. ಪರಿಕಲ್ಪನೆ ಸ್ವರ್ಗಕ್ಕಿಂತ ವಾಸ್ತವಿಕ ಬದುಕು ಬಹಳ ಮುಖ್ಯವಾಗಿತ್ತು. ಈ ಬದುಕಿನ ಪ್ರಯಾಣ ಎಲ್ಲಿಂದ ಎಲ್ಲಿಯವರೆಗೆ ಎಲ್ಲಿ ಆರಂಭವಾಗಿರುತ್ತದೆ, ಯಾವಾಗ ಮುಕ್ತಾಯವಾಗುತ್ತದೆ!

ಈ ದೇಶದ ದಾರ್ಶನಿಕರಿಗೆ ಜ್ಞಾನಿಗಳು ಬಹಳಷ್ಟು ಆಲೋಚನೆ ಮತ್ತು ಸಂಶೋಧನೆ ಮಾಡಿದರು. ಎಲ್ಲಿಯವರೆಗೆ ಕಣ್ಣು ನೋಡುತ್ತದೆಯೋ, ಕಿವಿಕೇಳುತ್ತದೆಯೋ ಬುದ್ಧಿಯು ವಿಚಾರ ಮಾಡುತ್ತದೆಯೋ, ಕಾಲು ನಡೆಯುತ್ತದೆಯೋ ಅಂದರೆ ಎಲ್ಲಿಯವರೆಗೆ ಈ ದೇಹದಲ್ಲಿ ಉಸಿರು ಇರುತ್ತದೆಯೋ ಅಲ್ಲಿಯವರೆಗೆ ಇರುತ್ತೇವೆ. ಉಸಿರು ನಿಂತ ಮೇಲೆ ಜೀವನವು ನಿಲ್ಲುತ್ತದೆ. ತಾಯಿಯ ಗರ್ಭದಿಂದ ಮನುಷ್ಯ ಈ ಭೂಮಿಗೆ ಬರುವಾಗ ಅವನಿಗೆ ಉಸಿರು ಅಷ್ಟೇ ಇತ್ತು. ಆದರೆ ಹೆಸರು ಇರಲಿಲ್ಲ. ಈ ಪೃಥ್ವಿಯನ್ನು ಬಿಟ್ಟು ಹೋಗುವಾಗ ಅವನಿಗೆ ಉಸಿರು ಇರುವುದಿಲ್ಲ. ಹೆಸರು ಉಳಿಯುವ ಕಾರ್ಯ ಮಾಡಬೇಕು. ಅದೇ ಬದುಕಿನ ಸಾರ್ಥಕತೆ.

ಈ ಬದುಕು ಎಷ್ಟು ಅದ್ಭುತವಾಗಿರುವುದು ಭಗವಂತ ಅಂದರೆ ಸಚ್ಚಿದಾನಂದ ಪರಿಪೂರ್ಣನಾದ ಧೀಶಕ್ತಿ. ನಿಸರ್ಗದೇವತೆ ಎಲ್ಲರಿಗೂ ಬದುಕುಕೊಟ್ಟಿದೆ. ಇವನು ಬಡವ, ಶ್ರೀಮಂತ ಎನ್ನುವ ತಾರತಮ್ಯ ಮಾಡದೆ ಬದುಕು ಕೊಟ್ಟಿದ್ದಾನೆ, ಸುಭಾಷಿತಕಾರ ಈ ಬಗ್ಗೆ ಸುಂದರವಾಗಿ ಹೇಳಿದ್ದಾನೆ –

**ಅಮಂತ್ರಮಕ್ಷರಂ ನಾಸ್ತಿ ವನಸ್ಪತಿಸಾಪಥಮ್ ।**
**ಅಯೋಗ್ಯಃ ಪುರುಷೋ ನಾಸ್ತಿ ಯೋಜಕಸ್ತತ್ರ ದುರ್ಲಭಃ ॥**

ಈ ಜಗತ್ತಿನಲ್ಲಿ ವರ್ಣಗಳಿಲ್ಲದೆ ಮಂತ್ರವಿಲ್ಲ. (ಪ್ರತಿಯೊಂದು) ಸಸ್ಯಗಳಲ್ಲಿ ಔಷಧಿಯ ಗುಣಗಳು ಇರುತ್ತವೆ. ಹಾಗೆಯೇ ಜಗತ್ತಿನಲ್ಲಿ ಅಯೋಗ್ಯವಂತ ಮನುಷ್ಯನು ಇರುವುದಿಲ್ಲ. ಏಕೆಂದರೆ ಮಾರ್ಗದರ್ಶಕರು ಅಥವಾ ಹೊಂದಾಣಿಕೆ ಮಾಡತಕ್ಕ ಯೋಜಕನು ಸಿಗದಿದ್ದಾಗ ಮನುಷ್ಯ ಹಾಳಾಗುತ್ತಾನೆ. ಆದ್ದರಿಂದ ಮಾನವರು ಒಳ್ಳೆಯ ಸಂಘವನ್ನು ಮಾಡಬೇಕು, ಇಲ್ಲದಿದ್ದರೆ ಮಠಗಳು, ಆಶ್ರಮಗಳು, ಗುರುಕುಲಗಳನ್ನು ಸೇರಬೇಕು, ಜ್ಞಾನವು ವಿಕಸನಗೊಳ್ಳುತ್ತವೆ.

ಜಗತ್ತಿನಲ್ಲಿ ದೇವರು ಸಿರಿವಂತನಿಗೂ ಒಂದು ಬದುಕು, ಬಡವನಿಗೂ ಒಂದು ಬದುಕನ್ನು ಕೊಟ್ಟಿದ್ದಾನೆ. ಎಲ್ಲರಿಗೂ ಒಂದು ಸುಂದರ ಬದುಕನ್ನು ಕೊಟ್ಟಿದ್ದಾನೆ. ದೇವರು ಹೇಗೆ ಕಲ್ಪಿಸಿದ್ದಾನೆ ಎಂದರೆ ಅರಮನೆಯಲ್ಲಿ ಶ್ರೀಮಂತ ಹಚ್ಚುವ ದೀಪವು ಬಂಗಾರದ್ದು, ಗುಡಿಸಲಿನಲ್ಲಿ ಬಡವ ಹಚ್ಚುವ ದೀಪ ಮಣ್ಣಿನದು. ಉರಿಯುವ ದೀಪ ಬಂಗಾರದ್ದಾದರೇನು,

* ಸಂಸ್ಕೃತ ಶಿಕ್ಷಕರು, ಶ್ರೀ ಸಿದ್ಧಗಂಗಾ ಮಠ

ಮಣ್ಣಿನದ್ದಾದರೇನು, ಆ ಬೆಳಕು ಇದೆ ನೋಡಿ; ಅದು ಶ್ರೀಮಂತವು ಅಲ್ಲ, ಬಡತನವೂ ಅಲ್ಲ, ಕೇವಲ ಬೆಳಕು ಅಷ್ಟೇ. ಹಾಗೇ ಜೀವನ ಅಂದರೆ ಅದೇ ಬದುಕು ಅಂತ ಸುಂದರವಾದ ಬದುಕನ್ನು ದೇವರು ಕಲ್ಪಿಸಿದ್ದಾನೆ.

ಬದುಕು ಸುಂದರವಾಗಿರುತ್ತದೆ. ನಾವು ಸಂತೋಷವಾಗಿರಬೇಕು. ತನ್ನ ನೆರೆಹೊರೆಯವರು ಸಂತೋಷವಾಗಿರಬೇಕು. ನಮಗೆಲ್ಲ ಆಶ್ರಯ ಕೊಟ್ಟಿರುವ ಈ ಜಗತ್ತು ಸುಂದರವಾಗಿಡಬೇಕು. "ಮನುಷ್ಯ" ಹೇಗಿರಬೇಕು ಎಂದರೆ –

**ಮಾನುಷ್ಯಂ ನಾವಮಾಸಾದ್ಯ ತರ ದುಃಖಮಹಾನದೀಂ ।**
**ಮೂಢ ಕಾಲೋ ನ ನಿದ್ರಾಯಾಃ ಇಯಂ ಸೌರ್ದುರ್ಲಭಾ ಪುನಃ ॥**

ಮಾನವ ಶರೀರವೆಂಬ ದೋಣಿಯನ್ನು ಪಡೆದು ದುಃಖವೆಂಬ ದೊಡ್ಡ ನದಿಯನ್ನು ದಾಟು ಮೂರ್ಖ ! ಇದು ನಿದ್ರೆಗೆ ಸಮಯವಲ್ಲ, ಈ ದೋಣಿಯು ಮತ್ತೆ ಸಿಕ್ಕುವುದಿಲ್ಲ ಎಂದು ಸುಭಾಷಿತಕಾರರು ಹೇಳಿದ್ದಾರೆ.

ಮನುಷ್ಯ ತಪ್ಪು ತಿಳುವಳಿಕೆಯಿಂದ, ಅಜ್ಞಾನದಿಂದ ಬದುಕು ಕೆಟ್ಟಿದೆ. ಒಳ್ಳೆಯ ಮಾರ್ಗ ಇದ್ದರು ಮನುಷ್ಯ ಆ ಬಗ್ಗೆ ಚಿಂತನೆ ಮಾಡುವುದಿಲ್ಲ. ಅದಕ್ಕಾಗಿ ಜ್ಞಾನಿಗಳು ಜ್ಞಾನವನ್ನು ಹಂಚುವ ಪ್ರಯತ್ನ ಮಾಡಿದರು. ಜ್ಞಾನದಲ್ಲಿ ಮಹತ್ತರವಾದ ಶಕ್ತಿಯಿದೆ. ಜ್ಞಾನ ಏನು ಮಾಡುತ್ತದೆ ಅಂದರೆ ಈ ಜಗತ್ತಿನಲ್ಲಿರುವ ವಿಚಾರವನ್ನು ಬಿಡಿಸಿ ತೋರಿಸುತ್ತದೆ. ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು, ಯಾವುದು ನಿತ್ಯ-ಅನಿತ್ಯ, ಯಾವುದು ಸತ್ಯ-ಅಸತ್ಯ, ಯಾವುದು ಹಿತ-ಅಹಿತ ಕೊಡುತ್ತದೆ ಎಂಬುದನ್ನು ತಿಳಿಸುತ್ತದೆ.

ಈ ಸೂಕ್ತಿ ಹೇಳುತ್ತದೆ –

**ಸರ್ವಹಿಂಸಾನಿವೃತ್ತಾಯೇ ನರಾಃ ಸರ್ವಂ ಸಹಾಶ್ಚಯೇ ।**
**ಸರ್ವಸ್ಯಾಶ್ರಯಭೂತಾಶ್ಚ ತೇ ನರಾಃ ಸ್ವರ್ಗಾಮಿನಃ ॥**

ಜಗತ್ತಿನಲ್ಲಿ ಎಲ್ಲ ರೀತಿಯಲ್ಲಿಯೂ ಹಿಂಸೆಯನ್ನು ಬಿಟ್ಟಿದ್ದಾರೋ, ಎಲ್ಲವನ್ನೂ ಸಹಿಸಿಕೊಳ್ಳುತ್ತಾರೆಯೋ, ಎಲ್ಲರಿಗೂ ಆಶ್ರಯವಾಗಿದ್ದಾರೆಯೋ ಅಂಥ ಜನರು ಸ್ವರ್ಗವನ್ನು ಪಡೆಯುತ್ತಾರೆ.

ಈ ದೇಶದ ಅನುಭಾವಿಗಳು ಗಾಢವಾದ ಧ್ಯಾನದಿಂದ ಚಿತ್ತವು ಪರಿಪಕ್ವ ಹೊಂದಿ ಸೃಷ್ಟಿಯ ರಹಸ್ಯದ ಅರಿವನ್ನು ಸಾಕ್ಷಾತ್ಕರಿಸಿ ಕೊಂಡರು. ಪರಮಸತ್ಯದ ಸಾಕ್ಷಾತ್ಕಾರವನ್ನು ಗಳಿಸಿಕೊಂಡ ಈ ಅನುಭಾವಿಗಳ ವಾಣಿ ಮುಂದಿನ ಜನತೆಗೆ ದಾರಿದೀಪವಾಯಿತು. ನಿತ್ಯವೂ ಅಖಂಡವೂ ಆದ ಜ್ಞಾನ ಈ ನಮ್ಮ ಋಷಿಗಳಿಗೆ ಗೋಚರಿಸದುದರಿಂದ ಅವರು ತತ್ತ್ವಜ್ಞಾನಿಗಳಾದರು. ಮತ್ತು ಮಾರ್ಗದರ್ಶಿಗಳಾದರು.

ಆತ್ಮಾನ್ವೇಷಣೆ ಹಾಗೂ ಆತ್ಮಸಾಕ್ಷಾತ್ಕಾರವೇ ಎಲ್ಲರ ಪರಮೋದ್ದೇಶವಾಗಬೇಕೆಂದು ಸಾರಿದರು. ಹೊರಗೆ ತೋರುತ್ತಿರುವ ಈ ಅಖಂಡವಾದ ವಿಶ್ವ ಯಾವುದೋ ಒಂದು ದಿವ್ಯಶಕ್ತಿಗೆ ಅಧೀನವಾಗಿದೆಯೆಂದೂ ಅದು "ಸತ್ಯ"ವೆಂದೂ ಅರಿತರು. ಈ "ಸತ್ಯ" ಜಗತ್ತಿಗೆ ಮೂಲಕಾರಣವೆಂದೂ ಇದನ್ನು ಅನ್ವೇಷಿಸಿ ಅನುಸರಿಸಿ ಸಾಕ್ಷಾತ್ಕರಿಸಿಕೊಳ್ಳುವುದು ಪರಮ ಪುರುಷಾರ್ಥವೆಂದೂ ಘೋಷಿಸಿದರು. ಹೀಗೆ ಆತ್ಮಜ್ಞಾನ ಪೂರ್ವಕವಾದ ವಿಶ್ವಜ್ಞಾನವನ್ನು ಪಡೆಯುವುದು ಇವರ ಮುಖ್ಯವಾದ ಉಪದೇಶವಾಯಿತು.

ಇಂತಹ ಅಪೂರ್ವವಾದ ತಪಸ್ಸಿನಿಂದ ಸತ್ಯಸಾಕ್ಷಾತ್ಕಾರವನ್ನು ಹೊಂದಿದ ಈ ಋಷಿಗಳು "ಸಾಕ್ಷಾತ್ಕೃತ ಧರ್ಮಾಣಃ ಋಷಯೋ ಬಭೂವ್ಯಃ" ತಮ್ಮ ತಪಸ್ಸಿನ ಫಲವನ್ನು ತಮ್ಮ ಅಯ್ಯೆಯ ಶಿಷ್ಯರ ಮುಖಾಂತರ ಜನತೆಗೆ ಧಾರೆಯೆರೆದರು.

ಸುಭಾಷಿತಕಾರರು ಹೇಳುತ್ತಾರೆ –

**ತಪಃ ಶೌಚಂ ದಯಾ ಸತ್ಯಂ ಇತಿ ಪಾದಾಃ ಕೃತೇ ಕೃತಾಃ ।**
**ಅಧರ್ಮಾಂಶೈಸ್ತ್ರಯೋ ಭಗ್ನಾಃ ಸ್ಮಯಸಂಗಮದೈಸ್ತವ ॥**

ಕೃತಯುಗದಲ್ಲಿ ಧರ್ಮಕ್ಕೆ ತಪಸ್ಸು, ಶುದ್ಧತೆ, ದಯೆ, ಸತ್ಯ ಎಂಬ ನಾಲ್ಕು ಪಾದಗಳು ಇದ್ದವು. ಅಧರ್ಮದ ಅಂಶಗಳಾದ, ಅಹಂಕಾರ, ಸಹವಾಸ ಮತ್ತು ಮದಗಳಿಂದ. ಅದರ ಮೂರು ಪಾದಗಳು ಅಂದರೆ ತಪಸ್ಸು, ಶುದ್ಧತೆ ಮತ್ತು ದಯೆ ಈ ಕಲಿಯುಗದಲ್ಲಿ ಮುರಿದು ಹೋದವು. ಈಗ ಸತ್ಯ ಒಂದೇ ಉಳಿದಿರುವುದರಿಂದ ಮಾನವರಾದವರು. ಸತ್ಯವನ್ನು ನುಡಿದರೆ ಜಗತ್ತಿಗೆ ಕೊಡುವ ಔದಾರ್ಯವಾಗಿರುತ್ತದೆ.

**ಕರ್ತವ್ಯಮೇವ ಕರ್ತವ್ಯಂ ಪ್ರಾಣೈಃ ಕಂಡಗತೈರಪಿ ।**
**ಅಕರ್ತವ್ಯಂದ ಕರ್ತವ್ಯಂ ಪ್ರಾಣೈಃ ಕಂಠಗತೈರಪಿ ॥**

ಗಂಟಲಲ್ಲಿ ಪ್ರಾಣ ಹೋಗುತ್ತಿದ್ದರೂ ಸಹ ಬೇಕಾದದ್ದನ್ನೇ ಮಾಡಬೇಕು, ಮಾಡಬಾರದ್ದನ್ನು ಮಾಡಲೇಬಾರದು. ಆದರಿಂದ ಸತ್ಯವಂತರಾಗಿ, ನೀತಿವಂತರಾಗಿ ಬದುಕಬೇಕು.



**ಸಮಾರಂಭ**

# ಪರಮಪೂಜ್ಯ ಲಿಂ. ಶ್ರೀ ಇಮ್ಮಡಿ ಮಹಾಲಿಂಗ ಮಹಾಸ್ವಾಮಿಗಳವರ ೩೧ನೇ ವರ್ಷದ ಸಂಸ್ಮರಣ ಹಾಗೂ ಲಿಂ. ಶ್ರೀ ನಿರ್ವಾಣೇಶ್ವರ ಭವನ ಲೋಕಾರ್ಪಣೆ



ಕನಕಪುರ ಶ್ರೀ ದೇಗುಲಮಠದಲ್ಲಿ ಆಗಸ್ಟ ೩, ೨೦೧೮ ರಂದು ಶ್ರೀ ನಿರ್ವಾಣೇಶ್ವರ ಭವನವನ್ನು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಸಾನ್ನಿಧ್ಯದಲ್ಲಿ ಭವನದ ದಾನಿ ಕೊಮ್ಮಘಟ್ಟದ ನಿವೃತ್ತ ಶಿಕ್ಷಕ ಶ್ರೀ ಚಂದ್ರಶೇಖರಯ್ಯ ಹಾಗೂ ಅವರ ಕುಟುಂಬದವರ ಉಪಸ್ಥಿತಿಯಲ್ಲಿ ಲೋಕಾರ್ಪಣೆ ಮಾಡಲಾಯಿತು.

ಶ್ರೀ ದೇಗುಲಮಠದ ಅಭಿವೃದ್ಧಿಗೆ ಮುನ್ನುಡಿ ಬರೆದ ಪೂಜ್ಯ ಲಿಂ. ಶ್ರೀ ಇಮ್ಮಡಿ ಮಹಾಲಿಂಗ ಮಹಾಸ್ವಾಮಿಗಳವರು ಸಂಸ್ಮರಣ ಸಮಾರಂಭ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ, ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಅಧ್ಯಕ್ಷತೆಯಲ್ಲಿ ನಡೆಯಿತು. ಸಮಾರಂಭದಲ್ಲಿ ಸುಪ್ರಸಿದ್ಧ ವಾಗ್ಮಿಗಳಾದ ಡಾ. ಸಿ. ಸೋಮಶೇಖರ್, ಕಳಿಂಗ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಡಾ. ಎಸ್. ಚಂದ್ರಪ್ಪ, ದೇಗುಲಪ್ರಭೆ ಸಂಪಾದಕರಾದ ಡಾ. ಸಿ. ಶಿವಕುಮಾರಸ್ವಾಮಿ, ಹಿರಿಯ ಜಾನಪದ ವಿದ್ವಾಂಸ ಹಾಗೂ ಸಿದ್ಧಗಂಗಾ ಮಾಸಪತ್ರಿಕೆಯ ಸಹಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ಶ್ರೀ ದೇಗುಲಮಠದ ಆಡಳಿತಾಧಿಕಾರಿ ಶ್ರೀ ರಂಗನಾಥ್, ಹಳೆ ವಿದ್ಯಾರ್ಥಿ ಸಂಘದ ಪದಾಧಿಕಾರಿಗಳು, ಕಟ್ಟಡದ ದಾನಿಗಳಾದ ಶ್ರೀ ಚಂದ್ರಶೇಖರಯ್ಯ, ವಚನಜ್ಯೋತಿ ಬಳಗದ ಅಧ್ಯಕ್ಷರಾದ ಶ್ರೀ ಎಸ್. ಪಿನಾಕಪಾಣಿ ಮೊದಲಾದವರು ಉಪಸ್ಥಿತರಿದ್ದರು.




ಡಾ. ಸಿ. ಸೋಮಶೇಖರ್, ಡಾ. ಎಸ್. ಚಂದ್ರಪ್ಪ, ಡಾ. ಸಿ. ಶಿವಕುಮಾರಸ್ವಾಮಿ ಅವರು ಪೂಜ್ಯ ಲಿಂ. ಶ್ರೀ ಇಮ್ಮಡಿ ಮಹಾಲಿಂಗ ಸ್ವಾಮಿಗಳವರ ಘನ ಶಿವವ್ಯಕ್ತಿತ್ವವನ್ನು ಕುರಿತು ಮಾತನಾಡಿದರು. ಇದೇ ಸಂದರ್ಭದಲ್ಲಿ ಶ್ರೀ ಚಂದ್ರಶೇಖರಯ್ಯ ಹಾಗೂ ಅವರ ಕುಟುಂಬದವರನ್ನು ಆತ್ಮೀಯವಾಗಿ ಸನ್ಮಾನಿಸಲಾಯಿತು. ಶ್ರೀ ಚಂದ್ರಶೇಖರಯ್ಯ ಅವರ ಪರಿಚಯವನ್ನು ಅವರ ಅಳಿಯಂದಿರಾದ ಶ್ರೀ ನಿರಂಜನಸ್ವಾಮಿ ಅವರು ಮಾಡಿಕೊಟ್ಟರು. ವೇದಿಕೆಯಲ್ಲಿದ್ದ ಗಣ್ಯರನ್ನು ಪರಮಪೂಜ್ಯ ಶ್ರೀ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರು ಶಾಲು ಹೊದಿಸಿ ಆಶೀರ್ವದಿಸಿದರು.

ಕಾರ್ಯಕ್ರಮಕ್ಕೆ ಮುನ್ನ ವಚನ ಜ್ಯೋತಿ ಬಳಗದಿಂದ ವಚನ ಶ್ರಾವಣ ಕಾರ್ಯಕ್ರಮದ ಅಂಗವಾಗಿ ವಚನ ಗಾಯನ ನಡೆಯಿತು. ಶ್ರೀ ಎಸ್. ಪಿನಾಕಪಾಣಿಯವರು ವಚನ ಸಾಹಿತ್ಯದ ಮಹತ್ವವನ್ನು ಕುರಿತು ಮಾತನಾಡಿದರು. ವಚನ ಗಾಯನ ಕಾರ್ಯಕ್ರಮದಲ್ಲಿ ಹಿಂದೂಸ್ತಾನಿ ಗಾಯಕರಾದ ಪಂ. ದೇವೇಂದ್ರಕುಮಾರ್ ಪತ್ತಾರ, ಶ್ರೀಮತಿ ಸರಸ್ವತಿ ಹೆಗಡೆ, ಶ್ರೀಮತಿ ಮೀನಾಕ್ಷಿ ಮೇಟಿ, ಶ್ರೀಮತಿ ಟಿ.ಎಂ. ಜಾನಕಿ, ಕರ್ನಾಟಕ ಸಂಗೀತ ವಿದೂಷಿ ಶ್ರೀಮತಿ ವೀಣಾ ಮೂರ್ತಿ ಅವರು ಸುಶ್ರಾವ್ಯವಾಗಿ ಹಾಡಿ ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡರು. ಶ್ರೀ ನಾಗೇಂದ್ರ ಅವರು ಕಾರ್ಯಕ್ರಮವನ್ನು ನಿರೂಪಿಸಿದರು.







## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೩೦೧. | ಶ್ರೀ ಜಿ.ವಿ. ಬಸವರಾಜು<br>ಚನ್ನರಾಯಪಟ್ಟಣ | ೨,೦೦೦ |
| ೨೩೦೨. | ಶ್ರೀ ಎಂ. ಜಯಣ್ಣ<br>ಬೆಂಗಳೂರು | ೧,೦೦೧ |
| ೨೩೦೩. | ಶ್ರೀ ಎಸ್.ಬಿ. ದೊಡ್ಡನಗೌಡ<br>ಎಂ.ಸುಗೂರು | ೨,೦೦೦ |
| ೨೩೦೪. | ಶ್ರೀ ಎಂ.ಎಸ್. ಪಾಂಡುನಪ್ಪ<br>ಬಳ್ಳಾರಿ | ೧,೦೦೦ |
| ೨೩೦೫. | ಶ್ರೀ ಎಸ್.ಬಿ. ಶಂಕರ್<br>ಸುಂಟಿಕೊಪ್ಪ | ೨೫,೦೦೦ |
| ೨೩೦೬. | ಶ್ರೀ ಬಸವರಾಹ್‌ಕುಕುಂದ<br>ಕಲಬುರಗಿ | ೨೫,೦೦೦ |
| ೨೩೦೭. | ಶ್ರೀ ಬಿ.ಸಿ. ನಂಜಪ್ಪ<br>ಹಾಸನ | ೧೫,೦೦೦ |
| ೨೩೦೮. | ಶ್ರೀ ಆರ್. ರಾಮಚಂದ್ರಯ್ಯ<br>ನೆಲಮಂಗಲ | ೨,೦೦೦ |
| ೨೩೦೯. | ಶ್ರೀ ಆರ್.ಎಸ್. ಹುಚ್ಚಾಚಾರಿ<br>ಬೆಂಗಳೂರು | ೨೫,೦೦೧ |
| ೨೩೧೦. | ಶ್ರೀ ವೇದಮೂರ್ತಿ ಶಿವಮೂರ್ತಯ್ಯಸ್ವಾಮಿ<br>ಫಕೀರಯ್ಯಸ್ವಾಮಿ, ಕಟಗೀಹಳ್ಳಿಮಠ,ಗುತ್ತಲ | ೨,೦೦೦ |
| ೨೩೧೧. | ಶ್ರೀ ಸದಾನಂದಮೂರ್ತಿ<br>ಬೆಂಗಳೂರು | ೨,೦೦೦ |
| ೨೩೧೨. | ಶ್ರೀ ಕೆ. ಬಸವರಾಜಪ್ಪ<br>ಸುರಹೊನ್ನೆ | ೧,೧೦೧ |
| ೨೩೧೩. | ಶ್ರೀ ತೃಪ್ತಿ ಚಿಟ್ಸ್ & ಇನ್‌ವೆಸ್ಟ್(ಪ್ರೈ.) ಲಿ.,<br>ಬೆಂಗಳೂರು | ೧೫,೦೦೦ |
| ೨೩೧೪. | ಶ್ರೀ ಟಿ. ಗುರುದೇವಪ್ಪ<br>ಹೊಳೆನರಸೀಪುರ | ೧೦,೦೦೫ |
| ೨೩೧೫. | ಶ್ರೀ ಎನ್. ರುದ್ರಮುನಿ<br>ಬೆಂಗಳೂರು | ೫೦೦ |
| ೨೩೧೬. | ಶ್ರೀ ಎಲ್. ರೇವಣಸಿದ್ಧಯ್ಯ<br>ಬೆಂಗಳೂರು | ೧೦,೧೦೦ |
| ೨೩೧೭. | ಶ್ರೀ ಕೆ.ಸಿ. ಶಿವಗಂಗಯ್ಯ<br>ತುಮಕೂರು | ೧೮,೧೦೦ |
| ೨೩೧೮. | ಶ್ರೀ ಕೆ. ಮುನೇಗೌಡ<br>ಸಿದ್ಧನಾಯಕನಹಳ್ಳಿ | ೫,೦೦೦ |
| ೨೩೧೯. | ಶ್ರೀ ಗೌರಿ<br>ಸಿರಗುಪ್ಪ | ೧೧,೧೧೧ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೩೨೦. | ಶ್ರೀ ನಾಗಭೂಷಣ<br>ಲಿಂಗಸಗೂರು | ೨,೦೦೦ |
| ೨೩೨೧. | ಶ್ರೀ ಎಂ.ಎಲ್. ಸೋಮಶೇಖರಯ್ಯ<br>ಬೆಂಗಳೂರು | ೫೦೦ |
| ೨೩೨೨. | ಶ್ರೀ ವೆಂಕಟಶಿವರೆಡ್ಡಿ<br>ಚೆಲ್ಲಾರ್‌ಪಲ್ಲಿ | ೧,೦೦೦ |
| ೨೩೨೩. | ಶ್ರೀ ಎಂ.ಆರ್. ಶಿವಶಂಕರ<br>ಬೆಂಗಳೂರು | ೫೦೦ |
| ೨೩೨೪ | ಶ್ರೀ ಪ್ರಕಾಶ್ ನಿಡಗುಂದಿ<br>ತಾಳಿಕೋಟೆ | ೨,೦೦೦ |
| ೨೩೨೩. | ಶ್ರೀ ಸಾಗರ್<br>ತುಮಕೂರು | ೧,೧೧೧ |
| ೨೩೨೪. | ಶ್ರೀ ಮಲ್ಲೇಶಪ್ಪ<br>ದೇವರಹೊಸಹಳ್ಳಿ | ೨,೦೦೦ |
| ೨೩೨೫. | ಶ್ರೀ ಜಿ.ಎಂ. ಮರಿಸ್ವಾಮಿ<br>ಕರೂರು | ೫,೦೦೧ |
| ೨೩೨೬. | ಶ್ರೀ ಕೆ. ಮಂಜುನಾಥಗೌಡ<br>ಕರೂರು | ೨,೦೦೦ |
| ೨೩೨೭. | ಶ್ರೀ ಮಲ್ಲಿಕಾರ್ಜುನ<br>ಕರೂರು | ೫೦೧ |
| ೨೩೨೮. | ಶ್ರೀ ಪಾಟೀಯಾಳ ಮಂಜುನಾಥಗೌಡ<br>ಕರೂರು | ೫೦೦ |
| ೨೩೨೯. | ಶ್ರೀ ಕೆ.ಪಿ. ಶಿವಮೂರ್ತಿ<br>ಎಸ್.ಐ.ಟಿ.. ತುಮಕೂರು | ೧೫,೦೦೧ |
| ೨೩೩೦. | ಶ್ರೀ ಎಂ.ಕುಮಾರ್<br>ಬೆಂಗಳೂರು | ೨,೦೦೦ |
| ೨೩೩೧. | ಶ್ರೀ ಹೊನ್ನಗಂಗಯ್ಯ<br>ವೀರಾಪುರ | ೨,೦೦೦ |
| ೨೩೩೨. | ಶ್ರೀಮತಿ ಎಂ.ಎನ್. ಶಭನ<br>ಬೆಂಗಳೂರು | ೫,೦೦೧ |
| ೨೩೩೩. | ಶ್ರೀ ಟಿ. ಚಂದ್ರಶೇಖರಯ್ಯ<br>ತುಮಕೂರು | ೩,೦೦೦ |
| ೨೩೩೪. | ಶ್ರೀ ಬಾಳೇಗೌಡರು ಸಿ.<br>ಬೆಂಗಳೂರು | ೨೫,೦೦೦ |
| ೨೩೩೫. | ಶ್ರೀ ಮಹದೇವ ಕೆ. ಮತ್ತು ಕುಟುಂಬ<br>ಬೆಂಗಳೂರು | ೭೫,೦೦೦ |

(ಮುಂದುವರೆಯುತ್ತದೆ)

RNI No. 17139/69

"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102



| | | |
|---|---|---|
| ೨೩೧೪. | ಶ್ರೀ ಟಿ. ಗುರುದೇವಪ್ಪ ಹೊಳೆನರಸೀಪುರ | ೧೦,೦೦೫ |
| ೨೩೧೫. | ಶ್ರೀ ಎನ್. ರುದ್ರಮುನಿ ಬೆಂಗಳೂರು | ೫೦೦ |
| ೨೩೧೬. | ಶ್ರೀ ಎಲ್. ರೇವಣಸಿದ್ಧಯ್ಯ ಬೆಂಗಳೂರು | ೧೦,೧೦೦ |
| ೨೩೧೭. | ಶ್ರೀ ಕೆ.ಸಿ. ಶಿವಗಂಗಯ್ಯ ತುಮಕೂರು | ೧೮,೧೦೦ |
| ೨೩೧೮. | ಶ್ರೀ ಕೆ. ಮುನೇಗೌಡ ಸಿದ್ಧನಾಯಕನಹಳ್ಳಿ | ೫,೦೦೦ |
| ೨೩೧೯. | ಶ್ರೀ ಗೌರಿ ಸಿರಗುಪ್ಪ | ೧೧,೧೧೧ |
| ೨೩೨೧. | ಶ್ರೀ ... ವೀರಾಪುರ | |
| ೨೩೨೨. | ಶ್ರೀಮತಿ ಎಂ.ಎನ್. ... ಬೆಂಗಳೂರು | |
| ೨೩೨೩. | ಶ್ರೀ ಟಿ. ಚಂದ್ರಶೇಖ... ತುಮಕೂರು | |
| ೨೩೨೪. | ಶ್ರೀ ಬಾಳೇಗೌಡರು ... ಬೆಂಗಳೂರು | |
| ೨೩೨೫. | ಶ್ರೀ ಮಹದೇವ ಕೆ. ... ಬೆಂಗಳೂರು | |